# ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಶಾಸನಶಾಸ್ತ್ರ ವಿಭಾಗಕ್ಕೆ
ಎಂ.ಫಿಲ್.ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕ
ಎಸ್.ಚನ್ನಬಸಪ್ಪ

ಮಾರ್ಗದರ್ಶಕರು
ಡಾ.ಎಂ.ಕೊಟ್ರೇಶ್
ಅಧ್ಯಾಪಕರು, ಶಾಸನಶಾಸ್ತ್ರ ವಿಭಾಗ



ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ೫೮೩ ೨೭೬







ಜೂನ್ ೨೦೦೭

# ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಶಾಸನಶಾಸ್ತ್ರ ವಿಭಾಗಕ್ಕೆ
ಎಂ.ಫಿಲ್.ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕ
ಎಸ್.ಚನ್ನಬಸಪ್ಪ



ಮಾರ್ಗದರ್ಶಕರು
ಡಾ.ಎಂ.ಕೊಟ್ರೇಶ್
ಅಧ್ಯಾಪಕರು, ಶಾಸನಶಾಸ್ತ್ರ ವಿಭಾಗ





ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಜೂನ್ ೨೦೦೭

## ಮಾರ್ಗದರ್ಶಕರ ಪ್ರಮಾಣಪತ್ರ

ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಎಸ್.ಚನ್ನಬಸಪ್ಪ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಎಂ. ಕೊಟ್ರೇಶ್

ಡಾ.ಎಂ.ಕೊಟ್ರೇಶ್
ಮಾರ್ಗದರ್ಶಕರು
ಶಾಸನಶಾಸ್ತ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೦.೦೨.೨೦೦೨.

# ಪ್ರಮಾಣ ಪತ್ರ

ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನ ಎಂಬ ನಿಬಂಧವನ್ನು ಡಾ. ಎಂ.ಕೊಟ್ರೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಎಸ್. ಚನ್ನಬಸಪ್ಪ

ಎಸ್. ಚನ್ನಬಸಪ್ಪ
ಸಂಶೋಧಕ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 20-02-2002

# ದಾವಣಗೆರೆ ಜಿಲ್ಲೆ




ಹೆಚ್. ಪೋಳಿ ಬಸಪ್ಪ. ದಾವಣಗೆರೆ ಜಿಲ್ಲೆಯ ಸ್ವದೇಶಿ ಚಳುವಳಿ.- ಕೃಪಾ

# ನೀಲಗುಂದ ಪರಿಸರ



ಹರಪನಹಳ್ಳಿ
ಅರಸನಹಾಳು
ಕೆ.ಕಲ್ಲಹಳ್ಳಿ
ಹಡಗಲಿ
ಹಲವಾಗಲು
ಕುಂಚೂರು
ಇಟ್ಟಿಗುಂಡಿ
ನೀಲಗುಂದ
ಮಾಚಿಹಳ್ಳಿ
ರಾಣೆಬೆನ್ನೂರು
ತಾಲ್ಲೂಕು
ಅಲಗಿಲವಾಡ
ಚಿರಸ್ತಹಳ್ಳಿ
ಗುಂಡದತ್ತಿ
ತಾವರ
ಗುಂದಿ
ನಿಟ್ಟೂರು
ಯರಬಾಳು
ನಿಟ್ಟೂರು
ಬಸಾಪುರ
ಕಡತಿ
ನೀಲಗುಂದ
ಯಡಿಹಳ್ಳಿ
ತೆಲಗಿ
ನನ್ನ ಅಧ್ಯಯನ ವ್ಯಾಪ್ತಿಯಲ್ಲಿ
ಬರುವ ಸ್ಥಳಗಳು
ನೀಲಗುಂದ
ಕುಂಚೂರು
ಹಲುವಾಗಲು
ಚಿರಸ್ತಹಳ್ಳಿ

# ಪರಿವಿಡಿ

೧

# ಅಧ್ಯಯನದ ಸ್ವರೂಪ ವ್ಯಾಪ್ತಿ ಮತ್ತು ವಿಧಾನ

ನೀಲಗುಂದ ಪರಿಸರದ ಇತಿಹಾಸವನ್ನು ತಿಳಿಯಲು ಅಲ್ಲಿ ದೊರೆಯುವ ಶಾಸನಗಳು ಈ ಅಧ್ಯಯನಕ್ಕೆ ಮೂಲ ಅಕರಗಳಾಗುತ್ತವೆ. ಅವು ಕನ್ನಡ ನಾಡಿನ ಪರಂಪರೆಯ ಹಿರಿಮೆಯನ್ನು ಸಾರುವ ಉದ್ದೇಶದವಾಗಿದೆ. ಶಾಸನಗಳು ಪ್ರಮುಖವಾಗಿ ನಾಡಿನ ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ಮುಂತಾದ ಅಂಶಗಳನ್ನು ಅರ್ಥ ಮಾಡಿಕೊಳ್ಳಲು ನೆರವಾದ ಸಾಮಗ್ರಿಗಳಾಗಿವೆ. ಇವು ರಾಜಕೀಯ ಹಾಗೂ ಸಾಂಸ್ಕೃತಿಕ ಚರಿತ್ರೆಯನ್ನು ಪುನಾರಚಿಸುವಲ್ಲಿ ಉಳಿದೆಲ್ಲ ಆಕರಗಳಿಗಿಂತ ಮಹತ್ತರವಾದ ಅಧಿಕೃತ ದಾಖಲೆಗಳಾಗಿವೆ.

ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಜನತೆಯ ಬದುಕಿನ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಸಮಸ್ಯೆಗಳು, ಅವರ ಜೀವನ ಮೌಲ್ಯಗಳು. ಇತ್ಯಾದಿಗಳ ವಿವರಣೆಯೇ ಆದೇಶದ ಇತಿಹಾಸ ಜನತೆಯ ಜೀವನವನ್ನು ಕುರಿತು ಇರುವಂತಹ ಇಂತಹ ಅಧ್ಯಯನವೇ ಸಮಾಜಿಕ ಅಧ್ಯಯನ ಅಥವಾ ಸಾಂಸ್ಕೃತಿಕ ಅಧ್ಯಯನವಾಗಿದೆ.[೧]

ಕರ್ನಾಟಕದ ಪ್ರಮುಖ ಅರಸು ಮನೆತನಗಳ ಬಗ್ಗೆ, ನಾಡುನುಡಿಗೆ ಸಂಬಂಧಿಸಿದಂತೆ, ಸಂಸ್ಕೃತಿಗೆ ಸಂಬಂಧಿಸದಂತೆ ಹಲವಾರು ಗ್ರಂಥಗಳು ಪ್ರಕಟಗೊಂಡಿವೆ. ಅಂದರೆ ಪ್ರಾದೇಶಿಕತೆಗೆ ಸಂಬಂಧಿಸಿದಂತೆ ಸ್ವಲ್ಪ ಪ್ರಮಾಣದ ಅಧ್ಯಯನ ನಡೆದಿವೆ ಎಂದು ಹೇಳಬಹುದು. ಆದರಲ್ಲೂ ವಿರಳವಾಗಿ ದೊರೆಯುವ ಅವಶೇಷಗಳ ಸಿಗದಿರುವ ಪ್ರದೇಶದ ಬಗ್ಗೆ ಅಧ್ಯಯನ ಪ್ರಯತ್ನಗಳು ನಡೆದಿಲ್ಲ. ಈ ಪ್ರದೇಶದಲ್ಲಿ ದೊರಕುವ ಸಾಮಗ್ರಿಗಳನ್ನು ಒಂದು ರೀತಿಯಲ್ಲಿ ವ್ಯವಸ್ಥಿತವಾಗಿ ಉಪಯೋಗಿಸಿಕೊಂಡು ಅಧ್ಯಯನ ಮಾಡಿದಲ್ಲಿ ಇಂತಹ ಇನ್ನೂ ಅನೇಕ ಸ್ಥಳೀಯ ಇತಿಹಾಸ ಮೂಲಗಳು ಬೆಳಕಿಗೆ ಬರುತ್ತವೆ.

ನೀಲಗುಂದ ಪರಿಸರದ ಸ್ಥಳೀಯ ಚರಿತ್ರೆಯನ್ನು ಅರ್ಥ ಮಾಡಿಕೊಳ್ಳಲು ಆ ಪರಿಸರದಲ್ಲಿ ದೊರೆಯುವ ಶಾಸನಗಳು, ಸ್ಮಾರಕಗಳು, ಐತಿಹ್ಯಗಳನ್ನು ಆಕರವಾಗಿ ಬಳಸಿಕೊಳ್ಳುವುದರೊಂದಿಗೆ ಕ್ಷೇತ್ರಕಾರ್ಯ ಕೈಗೊಂಡು ವಕ್ತೃ ಅಭಿಪ್ರಾಯಗಳನ್ನು ಆಧರಿಸಿ ಅಧ್ಯಯನ ಕಾರ್ಯವನ್ನು ಕೈಗೊಳ್ಳಲಾಗಿದೆ. ಈ ಅಧ್ಯಯನ ಕಾರ್ಯವು "ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನ" ಮಾಡಲು ಇಟ್ಟ ಮೊದಲ ಹೆಜ್ಜೆಯಾಗಿದೆ.

ನೀಲಗುಂದ ಪರಿಸರದ ಸಂಸ್ಕೃತಿಗೆ ಸಂಬಂಧಿಸಿದಂತೆ ಆಳವಾದ ಅಧ್ಯಯನ ನಡೆದಿಲ್ಲ. ಆದರೆ ಈ ಕುರಿತು ಲೇಖನಗಳು ಮತ್ತು ಪ್ರಬಂಧಗಳು ಬಂದಿವೆ. ಅಂತಹ ಬರವಣಿಗೆಗಳಲ್ಲಿ ಮುಖ್ಯವಾದವುಗಳೆಂದರೆ ಚನ್ನಬಸಪ್ಪ ಪಾಟೀಲ್ ಅವರ 'ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಯ ದೇವಾಲಯಗಳು'[೨], ಕುಂ.ಬಾ.ಸ ಅವರ 'ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ''[೩], ನಾಗಯ್ಯ ಜೆ.ಎಂ. 'ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ''[೪], ತಿಪ್ಪೆಸ್ವಾಮಿ 'ದಾವಣಗೆರೆ ಜಿಲ್ಲೆ ಶಾಸನಗಳ ಸಾಂಸ್ಕೃತಿಕ ಅಧ್ಯಯನ''[೫], ಸುರೇಶ್ ಕೆ.ಎಂ., ಮಾಡಲಗೇರಿ ಕೊಟ್ರೇಶ್ ಮತ್ತು ಇತರರು- 'ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ''[೬], ಮಂಜುನಾಥ ಪಾಟೀಲ್- 'ದಾವಣಗೆರೆ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ''[೭], ವಿರೂಪಾಕ್ಷಿ ಪೂಜಾರಹಳ್ಳಿ 'ಬಳ್ಳಾರಿ ಜಿಲ್ಲೆಯ ಪಾಳೇಗಾರರು''[೮], ಭಾರತಿ ಅಳವಂಡಿಮಠ- 'ಬಾಗಳಿ ಶಾಸನಗಳು ಮತ್ತು ಸಂಸ್ಕೃತಿ''[೯] ಸುಧಾಮಣಿ ಎಂ. 'ಸಂಕೇತಿ ಬ್ರಾಹ್ಮಣರ ವಲಸೆಯ ಕಾಲ''[೧೦], ಕುಂಬಾಸ 'ಹರಪನಹಳ್ಳಿ ಪಾಳೇಗಾರರು''[೧೧] ಸಿದ್ಧನಂಜೇಶ- 'ಗುರುರಾಜ ಚರಿತ್ರೆ''[೧೨], ನಾಗಯ್ಯ.ಜೆ.ಎಂ. ಅವರ 'ಬಳ್ಳಾರಿ ಜಿಲ್ಲೆಯ ಶಾಸನಗಳು''[೧೩], ಗಿರಿಜ.ಟಿ, 'ದಾವಣಗೆರೆ ನಮ್ಮ ಜಿಲ್ಲೆ''[೧೪], ಚಂದ್ರಶೇಖರ ನಾರಣಾಪುರ 'ಕರ್ನಾಟಕ ವೀರಶೈವ ಮಠಗಳು''[೧೫], ಬಡಿಗೇರ ವಿ.ಎಸ್., `ಬಳ್ಳಾರಿ ಸಾಂಸ್ಕೃತಿಕ ಇತಿಹಾಸ'[೧೬], ಬಳ್ಳಾರಿ ಜಿಲ್ಲೆಯ ಗೆಜೆಟಿಯರ್[೧೭], ದೇವರಕೊಂಡಾರೆಡ್ಡಿ ಮತ್ತು ಇತರರು- 'ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ''[೧೮] ಮತ್ತು ಇನ್ನೂ ಹಲವಾರು ಲೇಖನಗಳು ಮತ್ತು ಕೃತಿಗಳು ಈ ಪರಿಸರವನ್ನು ಕುರಿತು ಸಂಕ್ಷಿಪ್ತ ಮಾಹಿತಿಯನ್ನು ಒದಗಿಸುತ್ತವೆ.

ನೀಲಗುಂದ ಪರಿಸರದ ಇತಿಹಾಸವನ್ನು ತಿಳಿಯಬೇಕಾದರೆ ತತ್ಸಂಬಂಧದ ಸಮಕಾಲೀನ ಹಾಗೂ ಇತ್ತೀಚಿನ ಕಾಲದ ಆಕರಗಳು ಅವಶ್ಯಕ. ಅವುಗಳನ್ನು ಪ್ರತ್ಯಕ್ಷ ಮತ್ತು ಪರೋಕ್ಷ ಆಕರಗಳೆಂದು ವಿಭಾಗಿಸಿ ಸಾಹಿತ್ಯಕ ಮತ್ತು ಪುರಾತತ್ವ ಅಧ್ಯಯನ ಮಾಡಲಾಗಿದೆ.

ನೀಲಗುಂದ ಪರಿಸರದ ಭೌಗೋಳಿಕ ಲಕ್ಷಣ, ಮಳೆ ಪ್ರಮಾಣ, ಭೂಮಿಯ ವೈವಿಧ್ಯತೆ, ನದಿ, ಕೆರೆ, ಬಾವಿ, ಮುಖ್ಯ ಬೆಳೆಯುವ ಬೆಳೆಗಳ ಬಗ್ಗೆ ಮಾಹಿತಿ ನೀಡಲಾಗಿದೆ. ಈ ಪರಿಸರದಲ್ಲಿ ಬರುವ ಪುರಾತತ್ವ ನೆಲೆಗಳನ್ನು ಮತ್ತು ಇತಿಹಾಸದ ಆರಂಭದಿಂದ ಮೌರ್ಯರು, ಶಾತವಾಹನರು, ಕದಂಬರು, ಗಂಗರು ಪಲ್ಲವರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರ್ಯರು, ಪಾಂಡ್ಯರು, ಹೊಯ್ಸಳರು, ಯಾದವರು, ವಿಜಯನಗರ ಅರಸರು, ಪಾಳೆಯಗಾರರು ಮತ್ತು ಮಹಾಬಲಿ ವಂಶದವರು ಈ ಪರಿಸರದಲ್ಲಿ ಆಳ್ವಿಕೆ ನಡೆಸಿದ್ದಾರೆ ಎಂಬುವುದಕ್ಕೆ ದೊರೆತ ಶಾಸನಗಳನ್ನು ಪರಿಚಯಿಸುವುದೇ ನನ್ನ ಅಧ್ಯಯನದ ಉದ್ದೇಶವಾಗಿದೆ.

ನೀಲಗುಂದ ಪರಿಸರದ ಇತಿಹಾಸ ತಿಳಿಯಲು ತುಂಬ ಸಹಾಯಕವಾಗಿರುವ ಮೂಲ ಆಕರಗಳೆಂದರೆ ಶಿಲಾ ಶಾಸನಗಳು. ರಾಜರು, ಸಾಮಂತರು, ಅಧಿಕಾರಿಗಳು, ಸಮಾಜದಲ್ಲಿ ಒಳ್ಳೆಯ ಕಾರ್ಯಗಳನ್ನು

ನೆರವೇರಿಸಿದರೆ ಅಂತಹ ಕಾರ್ಯಗಳು ಬಹಳ ಕಾಲದವರೆಗೂ ಶಾಶ್ವತವಾಗಿ ಉಳಿಯುವಂತೆ ಶಿಲೆ, ಲೋಹ ಮತ್ತು ವಸ್ತುಗಳ ಮೇಲೆ ತಾವು ಸಾಧಿಸಿದ ಸಾಧನೆ ಹಾಗೂ ಐತಿಹಾಸಿಕ ಘಟನೆಗಳು ಮತ್ತು ರಾಜರು ನೀಡಿದ ದಾನ-ದತ್ತಿಗಳನ್ನು ತಿಳಿಸುವಂತಹ ಅಧಿಕೃತ ದಾಖಲೆಗಳೇ ಶಾಸನವಾಗಿವೆ.

ಶಾಸನಗಳು ಚರಿತ್ರೆಯ ಪುನಾರಚನೆಯಲ್ಲಿ ವಹಿಸಿದ ಪಾತ್ರ ತುಂಬಾ ಮಹತ್ವದ್ದು. ಇವು ಪ್ರಾಚೀನ ಬದುಕಿನ ಸಮಗ್ರ ಸಂವೇದನೆಗಳ ಪ್ರಾಮಾಣಿಕ ಧ್ವನಿಗಳಾಗಿರುವುದರಿಂದ ನಮ್ಮ ನಾಡಿನ ಜೀವನವು ಶಾಸನಗಳಲ್ಲಿ ಅಭಿವ್ಯಕ್ತಗೊಂಡಂತೆ ಪ್ರಾಯಶಃ ಇನ್ನೆಲ್ಲೂ ಲಿಖಿತ ದಾಖಲೆಗಳಲ್ಲಿ ವ್ಯಕ್ತವಾಗಿರಲಿಕ್ಕಿಲ್ಲವೆಂದು ಹೇಳಬಹುದು.

ನೀಲಗುಂದ ಪರಿಸರಕ್ಕೆ ಸಂಬಂಧಿಸಿದಂತೆ ೨೭ ಶಾಸನಗಳು ಕಂಡುಬರುತ್ತವೆ. ಅವು(South indian Inscription) ಎಸ್. ಆಯ್, ಆಯ್ ಸಂಪುಟ ೯, ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ ೧ರಲ್ಲಿ ಬೆಳಕು ಕಂಡಿವೆ. ಹೀಗೆ ಹಲವಾರು ಶಾಸನಗಳು ಪ್ರಕಟವಾದರೂ ಈ ಪರಿಸರದ ಶಾಸನಗಳ ಪರಿವೀಕ್ಷಣೆ ಅಧ್ಯಯನ ಆಳವಾಗಿ ಇನ್ನೂ ಆಗಬೇಕಾಗಿದೆ. ಈ ಮೇಲಿನ ಸಂಪುಟಗಳಲ್ಲಿ ಶಾಸನಗಳು ಪ್ರಕಟವಾಗಿರುವುದರಿಂದ ನೀಲಗುಂದ ಪರಿಸರದ ಇತಿಹಾಸ ತಿಳಿಯುವಲ್ಲಿ ಬಹಳಷ್ಟು ಅನುಕೂಲವಾಗಿವೆ. ಈ ಪ್ರದೇಶದ ಬಹುಪಾಲು ಶಾಸನಗಳು ದಾನ ಶಾಸನಗಳಾಗಿವೆ. ಈ ಶಾಸನಗಳ ಜೊತೆಗೆ ಅನೇಕ ಸ್ಮಾರಕಗಳು, ದೇವಾಲಯಗಳು, ವೀರಗಲ್ಲುಗಳು ಸಾಮಾಜಿಕ, ಧಾರ್ಮಿಕ ಸ್ಥಿತಿಗಳನ್ನು ತಿಳಿಸಲು ಸಹಾಯಕವಾಗಿವೆ.

ಅಲ್ಲದೆ ನೀಲಗುಂದ ಪರಿಸರದಲ್ಲಿ ಬರುವ ಶಾಸನಗಳಲ್ಲಿ ಸಾಹಿತ್ಯಕ ಅಂಶಗಳಾದ ಪ್ರದೇಶದ ವರ್ಣನೆ, ಶಾಸನದಲ್ಲಿ ಛಂದಸ್ಸು, ಶಾಸನಗಳ ಲಿಪಿಕಾರರು, ರಾಜರ ಪ್ರಶಸ್ತಿಗಳು ಅಗ್ರಹಾರ, ಮಹಾಜನರು ಇತ್ಯಾದಿ ಅಂಶಗಳನ್ನು ಪರಿವಿಡಿಯಲ್ಲಿ ದೃಢಪಡಿಸುವ ಪ್ರಯತ್ನ ಮಾಡಲಾಗಿದೆ.

ನೀಲಗುಂದ ಪರಿಸರದ ಇತಿಹಾಸ ಮತ್ತು ಸಂಸ್ಕೃತಿಯನ್ನು ತಿಳಿಸುವಲ್ಲಿ ದೇವಾಲಯಗಳು ಶಾಸನಗಳಷ್ಟೆ ಪ್ರಮುಖ ಪಾತ್ರ ವಹಿಸಿವೆ. ಇವು ಅಂದಿನ ಕಾಲದ ಜನರ ಚಟುವಟಿಕೆಗಳನ್ನು ಸಂಸ್ಕೃತಿಯ ಅಭಿರುಚಿಯನ್ನು, ಕಲಾ ಶೈಲಿಯನ್ನು, ಸಂಸ್ಕೃತಿಯ ವೈಶಿಷ್ಟತೆಯನ್ನು ತಿಳಿಸುವಲ್ಲಿ ಮಹತ್ತರವಾದ ಪಾತ್ರ ವಹಿಸಿವೆ. ಈ ಪರಿಸರದ ದೇವಾಲಯಗಳ ವಿವರವನ್ನು ಪ್ರಸ್ತುತ ನಿಬಂಧದಲ್ಲಿ ವಿವರಿಸಿ ಆ ದೇವಾಲಯಗಳಿಗೆ ಸಂಬಂಧಪಟ್ಟ ಅಥವಾ ಚಿತ್ರಗಳನ್ನು ನಿಬಂಧದ ಕೊನೆಯಲ್ಲಿ ಕೊಡಲಾಗಿದೆ.

ನೀಲಗುಂದ ಪರಿಸರದಲ್ಲಿ ಬರುವ ಮೂರ್ತಿಶಿಲ್ಪಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಇದರಲ್ಲಿ ಮೂರ್ತಿಯ ಸ್ವರೂಪ, ಲಕ್ಷಣ, ವಾಸ್ತುಶಿಲ್ಪದ ಶೈಲಿಯನ್ನು ಗುರುತಿಸುವುದೇ ನನ್ನ ಉದ್ದೇಶವಾಗಿದೆ.

ಈ ಪರಿಸರದ ವ್ಯಾಪ್ತಿಯಲ್ಲಿ ಬರುವ ನೀಲಗುಂದದ ಮಠದ ಇತಿಹಾಸವನ್ನು ಕುರಿತು ಚರ್ಚಿಸಲಾಗಿದೆ. ಇದರ ಬೆಳವಣಿಗೆ ಗುರು ಪರಂಪರೆ, ಗುರುಗಳು ಮಾಡಿದ ಸಾಧನೆಗಳನ್ನು ತಿಳಿಸುವುದೇ ನನ್ನ ಅಧ್ಯಯನದ ಉದ್ದೇಶವಾಗಿದೆ.

ಈ ಪ್ರದೇಶದ ಸಾಮಾಜಿಕ ಸ್ಥಿತಿಗತಿಗಳು, ಜಾತಿ ಪದ್ಧತಿಯಲ್ಲಿ ಜನರ ಸ್ಥಾನಮಾನ, ಇಲ್ಲಿಯ ಸ್ತ್ರೀಯರ ಸ್ಥಾನಮಾನ, ಧಾರ್ಮಿಕ ಆಚರಣೆಗಳು, ನಾಡು ನುಡಿಗೆ ಸಂಬಂಧಿಸಿದಂತೆ ಹಬ್ಬ ಮತ್ತು ಜಾತ್ರೆಗಳನ್ನು ಅಧ್ಯಯನದಲ್ಲಿ ಚರ್ಚಿಸಲಾಗಿದೆ.

## ಅಧ್ಯಯನ ವಿಧಾನ

ಪ್ರಸ್ತುತ ನಿಬಂಧ ರಚನೆಗೆ ಶಾಸನಗಳನ್ನು ಮುಖ್ಯ ಆಕರಗಳನ್ನಾಗಿರಿಸಿಕೊಂಡಿರುವುದರಿಂದ ಶಾಸನಗಳಲ್ಲಿದ್ದ ವಿಷಯವನ್ನು ಸಂಗ್ರಹಿಸಲು ಸೂಕ್ತ ವಿಧಾನವನ್ನು ಅನುಸರಿಸಲಾಗಿದೆ.

ಮೊದಲು ಪ್ರಕಟಗೊಂಡ ಎಲ್ಲ ಶಾಸನಗಳನ್ನು ಸಂಗ್ರಹಿಸಿ ಅವುಗಳನ್ನು ಪ್ರಬಂಧದಲ್ಲಿರುವ ಅಧ್ಯಾಯಗಳ ಪ್ರಕಾರ ವರ್ಗೀಕರಿಸಿಕೊಂಡು ಪ್ರತ್ಯೇಕ ಪಟ್ಟಿಕೆಗಳ ಮೂಲಕ ಸಂಗ್ರಹಿಸಲಾಯಿತು. ಮೊದಲು ಅಂಚೆ ಕಾರ್ಡಿನಾಕಾರದಲ್ಲಿ ಶಾಸನ ದೊರೆತ, ಸ್ಥಳ, ತಾಲ್ಲೂಕು, ಜಿಲ್ಲೆ, ಕಾಲ, ಅರಸು ಮನೆತನ ಇತ್ಯಾದಿಗಳನ್ನು ನಂತರದ ಪಟ್ಟಿಕೆಗಳಲ್ಲಿ ಹಲವಾರು ವಿಭಾಗಗಳಾಗಿ ಅಂದರೆ ಅಧ್ಯಯನಗಳ ವಿಷಯಕ್ಕನುಗುಣವಾಗಿ ವಿಂಗಡಿಸಿ ಕಾಲಾನುಕ್ರಮಣಿಕೆಯಲ್ಲಿ ಜೋಡಿಸಿ ಇವುಗಳನ್ನು ಆಧಾರವಾಗಿಟ್ಟುಕೊಂಡು ಸಂದರ್ಭಕ್ಕೆ ತಕ್ಕಂತೆ ಉಪಯುಕ್ತ ಕೃತಿಗಳನ್ನು ಬಳಸಿ ಪ್ರಸ್ತುತ ಪ್ರಬಂಧವನ್ನು ರಚಿಸಲಾಗಿದೆ. ಕ್ಷೇತ್ರ ಕಾರ್ಯವನ್ನು ಕೈಗೊಂಡು ನೀಲಗುಂದ ಪರಿಸರದ ಪ್ರಮುಖ ದೇವಾಲಯಗಳನ್ನು ಅಧ್ಯಯನ ಮಾಡುತ್ತ ಅದೇ ವೇಳೆಯಲ್ಲಿ ತೆಗೆದ ಛಾಯಾಚಿತ್ರಗಳನ್ನು ಪ್ರಬಂಧದ ಕೊನೆಯಲ್ಲಿ ತೋರಿಸಲಾಗಿದೆ.

ಈ ರೀತಿ ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನದಲ್ಲಿ ತನ್ನದೇ ಆದ ಕೆಲವು ವಿಶಿಷ್ಟತೆಯನ್ನು ಹೊಂದಿದೆ ಎಂಬುವುದಕ್ಕೆ ಈ ಮೇಲಿನ ಎಲ್ಲ ಅಂಶಗಳೇ ಪ್ರಮುಖ ಸಾಕ್ಷಿಯಾಗಿವೆ.

**ಅಡಿಟಿಪ್ಪಣಿಗಳು**

೧. ಚಿದಾನಂದಮೂರ್ತಿ ಎಂ., ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್ ಹೌಸ, ಬೆಂಗಳೂರು, ಪು.೨

೨. ಚನ್ನಬಸಪ್ಪ ಪಾಟೀಲ್, ೧೯೯೨, ಟೆಂಪಲ್ಸ್ ಆಫ್ ರಾಯಚೂರ್ ಆ್ಯಂಡ್ ಬಳ್ಳಾರಿ ಡಿಸ್ಟ್ರಿಕ್ಟ್, ಡೈರಕ್ಟರೇಟ್ ಆಫ್ ಆರ್ಕಾಲೆಜಿಕಲ್ ಮ್ಯೂಜಿಯಂ, ಮೈಸೂರು

೩. ಕುಂ.ಬಾ.ಸ., ೧೯೯೦, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ಶ್ರೀ ಮಾಲತೇಶ ಪ್ರಕಾಶನ, ಕುಂಚೂರು

೪. ನಾಗಯ್ಯ ಜೆ.ಎಂ., ೨೦೦೨, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಲೋಹಿಯಾ ಪ್ರಕಾಶನ, ಬಳ್ಳಾರಿ

೫. ತಿಪ್ಪೇಸ್ವಾಮಿ, ೨೦೦೨, ದಾವಣಗೆರೆ ಜಿಲ್ಲೆಯ ದೇವಾಲಯ, ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬. ಸುರೇಶ ಕೆ.ಎಂ., ೧೯೯೮, ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭. ಮಂಜುನಾಥ ಪಾಟೀಲ್, ೨೦೦೩, ದಾವಣಗೆರೆ ಜಿಲ್ಲೆ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪಿಎಚ್.ಡಿ.ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೇಗಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೯. ಭಾರತಿ ಅಳವಂಡಿಮಠ, ೨೦೦೩, ಬಾಗಳಿ ಶಾಸನಗಳ ಸಂಸ್ಕೃತಿ, ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ಸುಧಾಮಣಿ ಎಂ., ೨೦೦೧, ಸಂಕೇತಿ ಬ್ರಾಹ್ಮಣರ ವಲಸೆಯ ಕಾಲ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೧೧. ಕುಂ.ಬಾ.ಸ, ೧೯೯೬, ಹರಪನಹಳ್ಳಿ ಪಾಳೆಗಾರರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೨. ಸಿದ್ದನಂಜೇಶ, ೧೯೫೦, ಗುರುರಾಜ ಚರಿತ್ರೆ, ಮುರುಘಾಮಠ, ಧಾರವಾಡ

೧೩. ನಾಗಯ್ಯ ಜೆ.ಎಂ., ಬಳ್ಳಾರಿ ಜಿಲ್ಲೆಯ ಶಾಸನಗಳು, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೧೪. ಗಿರಿಜ ಟಿ., ದಾವಣಗೆರೆ ನಮ್ಮ ಜಿಲ್ಲೆ, ನಿಹಾರಿಕ ಪ್ರಕಾಶನ, ದಾವಣಗೆರೆ

೧೫. ಚಂದ್ರಶೇಖರ ನಾರಣಾಪುರ, ೨೦೦೭, ಕರ್ನಾಟಕ ವೀರಶೈವ ಮಠಗಳು, ಮುದ್ದು ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್, ಬೆಂಗಳೂರು

೧೬. ಬಡಿಗೇರ ವಿ.ಎಸ್., ೨೦೦೨, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಪಿಎಚ್.ಡಿ.ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೭. ಸೋಮನಾಥ ಯು., ೧೯೮೪, ಬಳ್ಳಾರಿ ಜಿಲ್ಲೆಯ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು

೧೮. ದೇವರಕೊಂಡಾ ರೆಡ್ಡಿ(ಸಂ), ೧೯೯೮, ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

## ೨

# ಭೌಗೋಳಿಕ ಹಿನ್ನೆಲೆ

## ೨.೧. ನೀಲಗುಂದದಸ್ಥಳ ನಿಷ್ಪತ್ತಿ

ಪ್ರಾಕೃತ ಭಾಷೆಯ ಹಿನ್ನೆಲೆಯಲ್ಲಿ ನೀಲಗುಂದ ಪದವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಪ್ರಾಚೀನ ಕಾಲದಲ್ಲಿ ಈ ನೀಲಗುಂದ ಗ್ರಾಮಕ್ಕೆ ನೀಲಕುಂದ ಎಂಬ ಹೆಸರು ಇದ್ದಿರಬೇಕು. ಕಾಲಾಂತರದಲ್ಲಿ ಉಚ್ಚಾರಣೆ ಬದಲಾವಣೆಯಿಂದ ನೀಲಕುಂದ>ನೀಲಗುಂದ ಆಗಿರಬೇಕೆಂದು ಸ್ಥಳೀಯರ ಅಭಿಪ್ರಾಯವಾಗಿದೆ. ನೀಲಗುಂದ ಪದ ನಿಷ್ಪತ್ತಿಯ ಬಗ್ಗೆ ಈ ಕೆಳಗಿನಂತೆ ಊಹಿಸಬಹುದಾಗಿದೆ.

ನೀಲಗುಂದ ಪದವನ್ನು ಬಿಡಿಸಿದಾಗ ನೀಲ + ಕುಂದ ಎಂಬ ಎರಡು ಪದಗಳು ದೊರೆಯುತ್ತವೆ. ಈ ಎರಡು ಪದಗಳಿಗೆ ಕನ್ನಡ ನಿಘಂಟಿನಲ್ಲಿ ಬೇರೆ ಬೇರೆ ಅರ್ಥ ಇರುವುದನ್ನು ಗಮನಿಸಬಹುದು.

**ನೀಲ :** ಎಂಬ ಪದದ ಅರ್ಥ ಕಡುನೀಲಿ, ಕಪ್ಪು ಬಣ್ಣ[೧], ಶಾಮಲವರ್ಣ, ಒಂದು ಬಗೆಯ ಸಸ್ಯ ಎಂಬ ಅರ್ಥಗಳಿವೆ.

**ಕುಂದ :** ಸ್ಥಳವಾಚಕವಾಗಿರುವ ಬೆಟ್ಟ, ಗುಡ್ಡ[೨] ಎಂದು ಹೇಳಲಾಗಿದೆ. ಈ ಎರಡು ಪದಗಳಿರುವ ಅರ್ಥವನ್ನು ಗಮನಿಸಿ ಈ ಗ್ರಾಮಕ್ಕೆ ಪ್ರಾಚೀನ ಹೆಸರು ನೀಲಕುಂದ ಇದ್ದು, ಕ್ರಮೇಣ ನೀಲಗುಂದ ಎಂಬ ಪದ ಬಳಕೆಗೆ ಬಂದಿರಬೇಕು. ಇದು ಪ್ರಾಕೃತಿಕವಾಗಿ ಆ ಗ್ರಾಮದ ಪಕ್ಕ ಇರುವ ಗುಡ್ಡದಿಂದಲೇ ಈ ಹೆಸರು ಪ್ರಾಪ್ತವಾಗಿದೆ.

### ನೀಲಗುಂದ ದೊರೆತ ಶಾಸನಗಳ ಉಲ್ಲೇಖ

೧. ನೀರ್ಗುಂದ[೩] ಕ್ರಿ.ಶ.೧೦೭೯ನೇ ಶತಮಾನದ ಮುಕ್ತಿರಾಮೇಶ್ವರ ದೇವಾಲಯದ ಒಳಭಾಗದಲ್ಲಿ ನಿಲ್ಲಿಸಿದ ಶಾಸನ ಉಲ್ಲೇಖ : ಶಾಸನ ಸಂಖ್ಯೆ ೮೮ - ಬಳ್ಳಾರಿ ಶಾಸನ ಸಂಪುಟ ೧, ಪು.೫೩೮-೫೩೯

೨. ನೀರ್ಗ್ಗುಂದ[೪] ಕ್ರಿ.ಶ.೧೧೧೦ರ ಭೀಮೇಶ್ವರ ದೇವಾಲಯದ ಅವರಣದಲ್ಲಿ ಕಂಡುಬಂದಿರುವ ಶಾಸನ ಉಲ್ಲೇಖ. ಶಾಸನ ಸಂಖ್ಯೆ ೭೮, ಪು.೫೨೯, ೫೩೦

೩. ನೀರಗುಂದ[೫] ಕ್ರಿ.ಶ.೧೧೬೨ರ ಪೂರ್ವೋಕ್ತ ,, ೭೯ ಪು.೫೩೧

## ಕುಂಚೂರು

ಸ್ಥಳೀಯ ಹೇಳಿಕೆಯ ಪ್ರಕಾರ ಕ್ರೌಂಚ ಎಂಬ ಅರಸನು ಈ ಪ್ರದೇಶವನ್ನು ಆಳ್ವಿಕೆ ನಡೆಸಿದ ಕಾರಣದಿಂದ ಕ್ರೌಂಚಪುರ ಎಂಬ ಹೆಸರು ಬಂದಿದ್ದು, ಭಾಷಿಕ ಬದಲಾವಣೆ ಹೊಂದುತ್ತ ಕೊಂಚಾಪುರವಾಗಿ ಕಾಲಾಂತರ ಕುಂಚೂರು ಆಗಿರಬೇಕೆಂದು ಇಲ್ಲಿ ಹಿರಿಯ ಅಭಿಪ್ರಾಯವಾಗಿದೆ. ಕುಂಚೂರು ಪದ ನಿಷ್ಪತ್ತಿ ಈ ಕೆಳಗಿನಂತೆ ವಿವರಿಸಲಾಗಿದೆ.

ಕುಂಚೂರು ಪದವನ್ನು ಬಿಡಿಸಿದಾಗ ಕುಂಚ+ಊರು ಎಂಬ ಎರಡು ಪದಗಳು ದೊರೆಯುತ್ತವೆ. ಈ ಪದಗಳಿಗೆ ಕನ್ನಡ ನಿಘಂಟಿನಲ್ಲಿ ಬೇರೆ ಬೇರೆ ಅರ್ಥಗಳು ಬರುತ್ತವೆ.

ಕುಂಚ - ಗೊಂಚಲು, ಗುಚ್ಛ, ನವಿಲುಗರಿಯಿಂದ ಮಾಡಿದ ಕೊರ್ಚಿಕೆ, ಚವರಿ, ಚಾಮರ, ಚಿತ್ರ ಬರೆಯುವುದಕ್ಕೆ ಉಪಯೋಗಿಸುವ ಕೂದಲಿನ ಕುಚ್ಚ, ಉಜ್ಜಿ ತೊಳೆಯುವುದಕ್ಕಾಗಿ ಬಳಸುವ ಸಾಧನ.[೬] ಊರು - ನೆಲೆಸು, ನೆಲೆಯಾಗಿ ನಿಲ್ಲು, ಭದ್ರವಾಗಿ ನಿಲ್ಲಿಸು, ನೆಡು, ನಾಟು, ಜಿನುಗು, ಒದ್ದೆಯಾಗು, ತೇವವಾಗು, ಹಳ್ಳಿ, ಗ್ರಾಮ.[೭] ಈ ಎರಡು ಪದಗಳ ಅರ್ಥವನ್ನು ಗಮನಿಸಿದಾಗ ಈ ಗ್ರಾಮಕ್ಕೆ ಪ್ರಾಚೀನ ಹೆಸರು ಕ್ರೌಂಚಪುರ ಇದ್ದು, ಕ್ರಮೇಣ ಕುಂಚೂರು ಎಂದು ಉಚ್ಚಾರಣೆಯಲ್ಲಿ ಬದಲಾವಣೆ ಹೊಂದಿರಬೇಕು.

## ಹಲುವಾಗಲು

ಈ ಪ್ರದೇಶದ ಸಮೀಪ ತುಂಗಭದ್ರಾನದಿಯು ಹರಿದುಹೋಗುವುದರಿಂದ ನಿಸರ್ಗದತ್ತವಾದ ಹುಲ್ಲುಗಾವಲು ಇರುವುದರಿಂದ ಈ ಗ್ರಾಮದ ಹೆಸರು ಮೊದಲು ಹುಲುಗಾವಲು ಇದ್ದಿರಬೇಕು. ತದನಂತರ ಕಾಲದಲ್ಲಿ ಭಾಷಿಕ ಬದಲಾವಣೆಗೊಂಡು ಉಚ್ಚಾರಣೆಯ ವ್ಯತ್ಯಾಸದಿಂದ ಇದು ಹಲುವಾಗಲು ಆಗಿರಬೇಕು. ಹಾಗೆಯೇ ಸ್ಥಳೀಯರ ಹೇಳಿಕೆಯಂತೆ ಪ್ರಾಚೀನ ಕಾಲದಿಂದ ಈ ಗ್ರಾಮವು ಹುಲ್ಲುಗಾವಲು ಪ್ರದೇಶವಾಗಿದ್ದು, ಇಲ್ಲಿ ಹಸುಗಳನ್ನು ಹೆಚ್ಚಾಗಿ ಸಾಕುತ್ತಿದ್ದರು. ಇವರು ಹಸುಗಳಿಂದ ಹಾಲನ್ನು ಕರೆದು ಹಾಲನ್ನು ಹೆಬ್ಬಾಗಿಲಿನ ಮುಖಾಂತರ ತೆಗೆದುಕೊಂಡು ಹೋಗಬೇಕಾಗಿತ್ತು. ಅದಕ್ಕಾಗಿ ಈ ಗ್ರಾಮಕ್ಕೆ ಮೊದಲ ಹೆಸರು ಹಾಲುಬಾಗಿಲು ಇತ್ತೆಂದು ಗ್ರಾಮದ ಹಿರಿಯರ ಅಭಿಪ್ರಾಯ. ಈ ಗ್ರಾಮದ ಹೆಸರು ಪ್ರಾಕೃತಿಕ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಹಲುವಾಗಲು ಪದ ಬಿಡಿಸಿದಾಗ ಹಲವು + ಹಲು + ಬಾಗಿಲು = ಹಲುವಾಗಲು ಎಂಬ ಪದಗಳು ದೊರೆಯುತ್ತದೆ. ಈ ಪದಗಳ ಅರ್ಥವು ಕನ್ನಡ ನಿಘಂಟಿನಲ್ಲಿ ಬೇರೆ ಬೇರೆ ಇರುವುದನ್ನು ತಿಳಿಯಬಹುದು.

ಹಲವು - ಬಹಳ, ಅನೇಕ[೮]

ಹಲು - ದುಃಖ ಪಡು, ರೋಧಿಸು[೯]

ಬಾಗಿಲು - ದ್ವಾರ, ಪ್ರವೇಶ ಮಾರ್ಗ[೧೦]

ಈ ರೀತಿಯಾಗಿ ಮೇಲೆ ವಿವರಿಸಿದ ಪದಗಳನ್ನು ಗಮನಿಸಿದಾಗ ಭಿನ್ನ ಭಿನ್ನ ಅರ್ಥಗಳು ಕಂಡುಬರುತ್ತವೆ. ಇದು ಹೊಂದಾಣಿಕೆಯಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಾಚೀನ ಹೆಸರು ಹುಲ್ಲುಗಾವಲುವಿದ್ದು, ತದನಂತರ ಉಚ್ಚಾರಣೆಯಲ್ಲಿ ಹಲುವಾಗಲು ಆಗಿರಬಹುದೆಂದು ನಿರ್ಧರಿಸಬಹುದು.

**ಶಿರಸ್ತಹಳ್ಳಿ ಅಥವಾ ಚಿರಸ್ತಹಳ್ಳಿ**

ನಿಷ್ಪತ್ತಿ : ಶಿರಸ್ತಹಳ್ಳಿ ಪದವನ್ನು ಬಿಡಿಸಿದಾಗ ಶಿರಸ್ತು + ಪಳ್ಳಿ ಎಂಬ ಎರಡು ಪದಗಳು ದೊರೆಯುತ್ತವೆ ಈ ಪದಗಳಿಗೆ ಕನ್ನಡ ನಿಘಂಟಿನಲ್ಲಿ ಬೇರೆ ಬೇರೆ ಅರ್ಥಗಳು ಬರುತ್ತವೆ.

ಶಿರಸ್ಸು = ತಲೆ, ಶಿರ[೧೧]

ಪಳ್ಳಿ = (ಹಳ್ಳಿ) ಚಿಕ್ಕ ಊರು, ಗ್ರಾಮ, ತಂಗುವಿಕೆ, ನೆಲಸುವಿಕೆ[೧೨]

ಈ ಎರಡು ಪದಗಳ ಅರ್ಥವನ್ನು ಗಮನಿಸಿದಾಗ ಈ ಗ್ರಾಮಕ್ಕೆ ಪ್ರಾಚೀನ ಹೆಸರು ಶಿರಸ್ತಹಳ್ಳಿ ಇದ್ದು, ಇದು ಕಾಲಾಂತರದಲ್ಲಿ ಗ್ರಾಮೀಣ ಬಾಷಿಕ ಬದಲಾವಣೆಯಿಂದ 'ಶಿ' ಬದಲಾಗಿ 'ಚಿ' ಬಳಕೆಯಾಗಿದೆ. ಏಕೆಂದರೆ ಶಿಷ್ಟರು 'ಶಿರ ಎಂದರೆ ಗ್ರಾಮೀಣರು 'ಚಿರ' ಎನ್ನುವರು. ಇದಕ್ಕೆ ಪ್ರಸ್ತುತ ಕಾಲದಲ್ಲಿ ಚಿರಸ್ತಹಳ್ಳಿ ಎಂದು ಉಚ್ಚಾರಣೆ ಬದಲಾವಣೆ ಹೊಂದಿರಬೇಕು.

## ೨.೨. ಭೌಗೋಳಿಕ ಲಕ್ಷಣಗಳು

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ನೀಲಗುಂದ ಪರಿಸರದ ಬಗ್ಗೆ ಮೊದಲಿಗೆ ಭೌಗೋಳಿಕ ವಿವರಗಳನ್ನು ತಿಳಿದುಕೊಳ್ಳುವುದು ಅವಶ್ಯಕ. ನೀಲಗುಂದ ಪರಿಸರದ ಗಡಿ ಪ್ರದೇಶಗಳು ವಾಯುಗುಣ, ಉಷ್ಣತೆ, ಮಳೆಯ ಪ್ರಮಾಣ, ಬೆಳೆಗಳು ಮತ್ತು ಭೌಗೋಳಿಕ ಲಕ್ಷಣಗಳ ಕುರಿತು ವಿವರವಾಗಿ ತಿಳಿಸಲು ಪ್ರಯತ್ನಿಸಲಾಗಿದೆ.

ನೀಲಗುಂದ ಪರಿಸರದ ಪೂರ್ವದಲ್ಲಿ ಅರಸೀಕೆರೆ, ಗುಂಡಗತ್ತಿ ಪಶ್ಚಿಮಕ್ಕೆ ಮೈಲಾರ, ಉತ್ತರಕ್ಕೆ ಹರಪನಹಳ್ಳಿ ದಕ್ಷಿಣಕ್ಕೆ ದುಗ್ಗಾವತಿ, ಹರಿಹರ ಮೊದಲಾದ ಗಡಿಭಾಗಗಳಿವೆ.

**ಮೇಲ್ಮೈ ಲಕ್ಷಣಗಳು**

ನೀಲಗುಂದ ಪರಿಸರದ ಒಟ್ಟು ವಿಸ್ತೀರ್ಣ ೨೨,೨೨೮ ಎಕರೆ ೦೩ ಗುಂಟೆ ಇದೆ. ೧೭,೪೧೩ ಎಕರೆ ೭೪ ಗುಂಟೆ ಸಾಗುವಳಿ ಭೂಮಿಯನ್ನು ಹೊಂದಿದ್ದು, ಇದರಲ್ಲಿ ನೀರಾವರಿ ಭೂಮಿ ೭,೧೩೦ ಎಕರೆ ಇದ್ದು ಇದರಲ್ಲಿ ಅರಣ್ಯ ಭೂಮಿ ೫,೦೦೬ ಎಕರೆ ೭೧ ಗುಂಟೆ ಕಂಡುಬರುತ್ತದೆ. ಇದರ ಅಕ್ಷಾಂಶ ೧೪.೨೮ ಮತ್ತು ೭೪.೫೯ ರೇಖಾಂಶವಾಗಿದೆ.(ಕಂದಾಯ ಇಲಾಖೆಯಿಂದ ದೊರೆತ ಮಾಹಿತಿ).

## ವಾಯುಗುಣ ಮತ್ತು ಮಳೆ

ನೀಲಗುಂದ ತೇವರಹಿತ ಹವೆಯಿಂದ ಕೂಡಿದ್ದು, ಜನವರಿಯಿಂದ ಮೇ ತಿಂಗಳವರೆಗೆ ಶುಷ್ಕ ಹವೆ ಇರುತ್ತದೆ. ಜೂನ್ ತಿಂಗಳಿಂದ ಡಿಸೆಂಬರ್ ತಿಂಗಳವರೆಗೆ ಸಾಮಾನ್ಯ ಮಳೆಗಾಲ ಇರುತ್ತದೆ. ವಾರ್ಷಿಕ ಸರಾಸರಿ ಮಳೆ ಪ್ರಮಾಣ ೬೩೦.೨೮ ಮೀ. ಬೀಳುತ್ತದೆಂದು ತಾಲ್ಲೂಕು ಕಛೇರಿ ಅಧಿಕಾರಿಗಳಿಂದ ತಿಳಿದುಬರುತ್ತದೆ.

## ಬೆಟ್ಟಗಳು

ನೀಲಗುಂದ ಪರಿಸರ ಸುತ್ತ ಮುತ್ತ ಬೆಟ್ಟಗುಡ್ಡಗಳಿಂದ ಆವೃತ್ತವಾಗಿದ್ದ ಕಾರಣ ಅಲ್ಲಿಯ ಸ್ಥಳೀಯ ಜನರು ದೇವರ ಹೆಸರುಗಳಿಂದ ಬೆಟ್ಟಗಳನ್ನು ಕರೆಯುವುದು ಇಲ್ಲಿ ಗಮನಿಸಬಹುದಾಗಿದೆ. ತಿಮ್ಮಪ್ಪಗುಡ್ಡ, ಮಳೆಮಲ್ಲಪ್ಪನಗುಡ್ಡ ಮತ್ತೋರು ಗುಡ್ಡ ದೇವರಗುಡ್ಡ, ದೊಡ್ಡ ಗುಡ್ಡ, ಚಕ್ರಕಲ್ಲುಗುಡ್ಡ ಇತ್ಯಾದಿ ಹೆಸರುಗಳು ಕಂಡುಬರುತ್ತವೆ. ಈ ಬೆಟ್ಟಗಳಲ್ಲಿ ವಿವಿಧ ಖನಿಜಗಳು ದೊರೆಯುತ್ತವೆ. ನೀಲಗುಂದದ ತಿಮ್ಮಪ್ಪನ ಗುಡ್ಡದಲ್ಲಿ ಬಳಪದಕಲ್ಲು ಮತ್ತೂರು ಗುಡ್ಡದಲ್ಲಿ ಅಲ್ಪ ಪ್ರಮಾಣದ ಕಬ್ಬಿಣ ಅದಿರು. ದೊಡ್ಡ ಗುಡ್ಡ ಮತ್ತು ಚಕ್ರಕಲ್ಲು ಗುಡ್ಡಗಳಲ್ಲಿ ಬಿಳಿಮಟ್ಟೆ ದೊರೆಯುತ್ತದೆ. ಹಾಗಾಗಿ ಈ ಬೆಟ್ಟಗಳಲ್ಲಿ ಸಸ್ಯ ಸಂಪತ್ತು ಕಡಿಮೆ ಪ್ರಮಾಣದಲ್ಲಿದೆ.

## ನದಿ, ಕೆರೆ, ಬಾವಿ

ನೀಲಗುಂದ ಪರಿಸರದ ಪಶ್ಚಿಮಕ್ಕೆ ತುಂಗಭದ್ರಾ ನದಿಯು ಹಲುವಾಗಲು ಗ್ರಾಮದಿಂದ ಸುಮಾರು ಮೂರು ಕಿ.ಮೀ. ದೂರದಲ್ಲಿ ಉತ್ತರಾಭಿಮುಖವಾಗಿ ಹರಿಯುತ್ತದೆ. ಕನ್ನಡ ನಾಡಿನ ಜೀವನದಿಗಳಲ್ಲಿ ಒಂದಾಗಿರುವ ತುಂಗಭದ್ರಾ ನದಿಯು ಉತ್ತರ ಕರ್ನಾಟಕದ ಕೆಲವು ಭಾಗಗಳಿಗೆ ಅತಿ ಉಪಯುಕ್ತ ನದಿಯಾಗಿದೆ.

ನೀಲಗುಂದ ಪರಿಸರದಲ್ಲಿ ಒಟ್ಟು ನಾಲ್ಕು ಕೆರೆಗಳಿದ್ದು, ಇವುಗಳಿಗೆ ಮಳೆಯ ನೀರೇ ಆಧಾರ. ಈ ಪ್ರದೇಶದಲ್ಲಿ ವೃತ್ತಾಕಾರದ ಬಾವಿಗಳು ಆರು ಇದ್ದು ಸುಮಾರು ೩೦ ಅಡಿ ಆಳವನ್ನು ಹೊಂದಿವೆ. ಉದ್ದ ೧೦ x ೮ ಅಗಲವನ್ನು ಹೊಂದಿವೆ.

ಚೌಕಾಕಾರದ ಎಂಟು ಬಾವಿಗಳಿದ್ದು ೧೫ x ೨೦ ಉದ್ದ ಮತ್ತು ಅಗಲವನ್ನು ಹೊಂದಿವೆ. ಸುಮಾರು ೨೫ ಅಡಿ ಆಳದ ೩೦ ಬಾವಿಗಳಿದ್ದು ಕೆಲವು ಬಾವಿಗಳಲ್ಲಿ ಜರಿಗಳಿದ್ದು ಇನ್ನೂ ಕೆಲವು ಬಾವಿಗಳಿಗೆ ಮಳೆ ನೀರು ಆಶ್ರಯವಾಗಿದೆ.

## ಬೆಳೆಗಳು

ನೀಲಗುಂದ ಪರಿಸರದಲ್ಲಿ ವಿವಿಧ ಮಾದರಿಯ ಭೂಮಿಗಳು ಕಂಡುಬಂದಿದ್ದು, ಅವುಗಳಲ್ಲಿ ಕೆಂಪುಮಣ್ಣು ಮರಳುಮಣ್ಣು, ಎರೆಮಣ್ಣು, ಕಪ್ಪುಮಣ್ಣು, ಸವುಳು ಮಣ್ಣುಗಳಿದ್ದು ಈ ಭೂಮಿಯು

ಏರಿಳಿತದಲ್ಲಿದೆ. ಈ ಪ್ರದೇಶದಲ್ಲಿ ರೈತರು ವರ್ಷದಲ್ಲಿ ಮುಂಗಾರು ಬೆಳೆ ಮತ್ತು ಹಿಂಗಾರು ಬೆಳೆಗಳನ್ನು ಬೆಳೆಯುತ್ತಾರೆ.

ಮುಂಗಾರು ಬೆಳೆಯಲ್ಲಿ - ಜೋಳ, ಮೆಕ್ಕಿಜೋಳ, ಹೆಸರು, ರಾಗಿ, ಶೇಂಗಾ, ಸಜ್ಜೆ, ಅಲಸಂದಿ, ತೊಗರಿ, ಇತ್ಯಾದಿಗಳನ್ನು ಬೆಳೆದರೆ ಹಿಂಗಾರು ಬೆಳೆಯಲ್ಲಿ - ಹತ್ತಿ, ಸೂರ್ಯಕಾಂತಿ, ಗೋಧಿ, ಕಡಲೆ, ತುಂಬಾಕು, ಹುರುಳಿ ಇತ್ಯಾದಿಗಳನ್ನು ಬೆಳೆಯುತ್ತಾರೆ. ಈ ಮೇಲಿನ ಬೆಳಗಳಲ್ಲದೆ ನೀರಾವರಿ ಭೂಮಿಯಲ್ಲಿ ಮೇಣಸಿನ ಕಾಯಿ, ಈರುಳ್ಳಿ, ಮತ್ತು ವಿವಿಧ ತರಕಾರಿಗಳನ್ನು ಬೆಳೆಯುತ್ತಾರೆ.

**ಐತಿಹಾಸಿಕ ಹಿನ್ನೆಲೆ**

ಮಾನವನ ಇತಿಹಾಸವನ್ನು ಪ್ರಮುಖವಾಗಿ ಎರಡು ಮುಖ್ಯ ವಿಭಾಗಗಳನ್ನಾಗಿ ಮಾಡಲಾಗಿದೆ. ಮೊದಲನೆಯದು ಅಕ್ಷರ ಜ್ಞಾನವಿಲ್ಲದ ಹಂತ ಅಥವಾ ಪ್ರಾಗಿತಿಹಾಸ ಅಥವಾ ಪೂರ್ವೇತಿಹಾಸ. ಎರಡನೆಯದು ಅಕ್ಷರಜ್ಞಾನವಿದ್ದ ಹಂತ ಅಥವಾ ರಾಜಮಹಾರಾಜರ ಕಾಲ ಅಥವಾ ಇತಿಹಾಸ ಕಾಲವೆಂದು ಹೇಳಬಹುದು. ಅವುಗಳಲ್ಲಿ ಪ್ರಾಗಿತಿಹಾಸ ಕಾಲಮಾನ ಸುದೀರ್ಘವಾದುದಾಗಿದೆ. ಇಂದಿಗೆ ಸುಮಾರು ೫ ಲಕ್ಷ ವರ್ಷಗಳಿಂದ ಕ್ರಿಸ್ತಶಕ ಆರಂಭದವರೆಗೂ ಅದು ರೂಢಿಯಲ್ಲಿತೆಂದು ತಿಳಿಯುತ್ತದೆ. ಈ ಕಾಲಮಾನವನ್ನು ಆಗ ನಿತ್ಯ ಬಳಕೆಯಲ್ಲಿದ್ದ ವಸ್ತುವಿನ ಆಧಾರದಿಂದ ಶಿಲಾಯುಗ ಮತ್ತು ಲೋಹಯುಗ ಸಂಸ್ಕೃತಿ ಎಂಬ ಎರಡು ವಿಭಾಗ ಮಾಡಲಾಗಿದೆ.[೧೩]

ಶಿಲಾಯುಗ ಸಂಸ್ಕೃತಿ ಹಂತವನ್ನು ಅವಶೇಷ ಹಾಗೂ ಅವುಗಳ ಬೆಳವಣಿಗೆ ಮತ್ತು ಕುಶಲತೆಯನ್ನನುಸರಿಸಿ ಹಳೆಯ ಶಿಲಾಯುಗ ಸಂಸ್ಕೃತಿ, ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಮತ್ತು ನೂತನ ಶಿಲಾಯುಗ ಸಂಸ್ಕೃತಿ ಎಂದು ವರ್ಗೀಕರಿಸಲಾಗಿದೆ. ಅಧ್ಯಯನ ತೀವ್ರತೆ ಹಾಗೂ ಪ್ರತಿಯೊಂದು ಹಂತಗಳಲ್ಲಾದ ಬದಲಾವಣೆಗಳನ್ನು ಗುರುತಿಸಿ ಹೊಸ ಹೊಸ ವಿಷಯಗಳ ಬಗೆಗೆ ತಿಳಿಯಲು ಆಧಾರವಾಗಿದೆ. ಈ ಹಿನ್ನೆಲೆಯಲ್ಲಿ ನೀಲಗುಂದ ಪರಿಸರವನ್ನು ಪುರಾತತ್ವ ನೆಲೆಗಳಲ್ಲಿ ಅಧ್ಯಯನ ಮಾಡಲಾಗಿದೆ.[೧೪]

ನೀಲಗುಂದ ಪರಿಸರದ ಸುತ್ತಮುತ್ತ ಪುರಾತತ್ವ ನೆಲೆಗಳು ಇರುವುದನ್ನು ಗಮನಿಸಬಹುದು. ಈಗಾಗಲೇ ಅಧ್ಯಯನ ನಡೆದಿರುವಂತೆ ನೀಲಗುಂದ, ತೆಲಗಿ, ಮಾಡಲಗೇರಿ ಮತ್ತು ಬಾಗಳಿಗಳಲ್ಲಿ ಪುರಾತತ್ವ ನೆಲೆಗಳನ್ನು ವಿದ್ವಾಂಸರು ಸಂಶೋಧಿಸಿದ್ದಾರೆ. ಈ ಹಿನ್ನೆಲೆಯಲ್ಲಿ ನೀಲಗುಂದ ಪರಿಸರದಲ್ಲಿ ಬರುವ ತೆಲಗಿ, ನೀಲಗುಂದದ ಮಾಡಲಗೇರಿ ಮತ್ತು ಬಾಗಳಿ ಈ ಸ್ಥಳಗಳಲ್ಲಿ ಬೃಹತ್ ಶಿಲಾಯುಗ, ಸೂಕ್ಷ್ಮ ಶಿಲಾಯುಗ ಮತ್ತು ನೂತನ ಶಿಲಾಯುಗದ ಸಂಸ್ಕೃತಿಗಳು ಹಾಗೂ ಇತಿಹಾಸ ಆರಂಭಕಾಲದ ಅವಶೇಷಗಳು ಕಂಡುಬಂದಿವೆ.

## ೧. ಬೃಹತ್ ಶಿಲಾಯುಗ ಸಂಸ್ಕೃತಿ

ಬೃಹತ್ ಶಿಲಾಯುಗದ ಸಂಸ್ಕೃತಿಯ ಹಂತದಲ್ಲಿ ಕಬ್ಬಿಣವನ್ನು ಎಲ್ಲ ಕೆಲಸ ಕಾರ್ಯಗಳಲ್ಲಿ ಬಳಸುತ್ತಿದ್ದರು. ಜೊತೆಗೆ ಬೃಹತ್ ಗಾತ್ರದ ಕಲ್ಲು ಚಪ್ಪಡಿಗಳನ್ನು ಬಳಸಿ ಸಮಾಧಿಗಳನ್ನು ರೂಪಿಸಿದ್ದು, ಈ ಹಂತದಲ್ಲಿ ಇದನ್ನು ಕಬ್ಬಿಣ ಯುಗದ ಬೃಹತ್ ಶಿಲಾಗೋರಿ ಸಂಸ್ಕೃತಿ ಎಂದು ಅಥವಾ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗಿದೆ.[೧೫] ಈ ಸಂಸ್ಕೃತಿಯ ನೆಲೆಗಳು ನೀಲಗುಂದ[೧೬], ತೆಲಗಿ[೧೭]ಗಳಲ್ಲಿ ಮಾತ್ರ ಕಂಡುಬಂದಿವೆ. ಮಾಡಲಗೇರಿ[೧೮]ಯಲ್ಲಿ ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆಗಳು ದೊರೆತಿವೆ.

## ೨. ನೂತನ ಶಿಲಾಯುಗ

ನೂತನ ಶಿಲಾಯುಗದಲ್ಲಿ ದ್ವಿಮುಖ ಅಲಗುಳ್ಳ, ತೆಳು ನೀಲಚಕ್ಕೆ, ಕಿರು ನೀಳಚಕ್ಕೆ, ತ್ರಿಭುಜಾಕಾರದ ಮೊನೆ, ಕೊಕ್ಕೊಳ್ಳ ಮೊನೆ, ಎಲೆಯಾಕಾರದ ಮೊನೆ ಒಬ್ಬದಿ ಮತ್ತು ಇಬ್ಬದಿ ಹೆರೆಚಕ್ಕೆ ಒಳಬಾಗಿದಂಡಿನ ಹೆರೆಡಕ್ಕೆ ಮೂಲಗಟ್ಟಿ ಹೆರೆಚಕ್ಕೆ, ಕೊರೆಗ, ಅರ್ಧಚಂದ್ರಾಕೃತಿ ಮೊದಲಾದ ಉಪಕರಣಗಳು ಬಳಕೆಯಲ್ಲಿ ಇದ್ದುವೆಂದು ತಿಳಿದುಬರುತ್ತದೆ.[೧೯] ಮಾಡಲಗೇರಿ[೨೦]ಯಲ್ಲಿ ವಿವಿಧ ಮಾದರಿಯ ಶಿಲೋಪಕರಣ ಹಾಗೂ ಬೂದು ಬಣ್ಣದ ಮಡಿಕೆ ಭಾಗಗಳು ದೊರೆತಿವೆ.

## ೩. ಸೂಕ್ಷ್ಮ ಶಿಲಾಯುಗ

ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಹಂತದಲ್ಲಿ ಶಿಲೋಪಕರಣಗಳು ಅತಿ ಕಿರುಗಾತ್ರದವುಗಳಾಗಿವೆ. ಇದು ಈ ಸಂಸ್ಕೃತಿಯ ವಿಶಿಷ್ಟ ಲಕ್ಷಣವಾಗಿದ್ದು, ವೈವಿಧ್ಯ ಉಪಕರಣಗಳು ಕಂಡುಬಂದಿವೆ. ನೀಳಚಕ್ಕೆ ಮಾದರಿ, ಹೆರೆಚಕ್ಕೆ ಮಾದರಿ, ಮೊನೆ ಮಾದರಿ, ಬಾಣದ ಮೊನೆ, ಕೊರೆಗೆ, ಕೊರೆಯುಳಿ, ಅರ್ಧ ಚಂದ್ರಾಕೃತಿ, ದಬ್ಬಳ ಮೊದಲಾದ ಉಪಕರಣಗಳು ಕಂಡುಬಂದಿವೆ.[೨೧] ಮಾಡಲಗೇರಿ[೨೨]ಯಲ್ಲಿ ವಿವಿಧ ಮಾದರಿಯ ಶಿಲೋಪಕರಣ ಹಾಗೂ ಬೂದುಬಣ್ಣದ ಮಡಕೆಗಳು ದೊರೆತಿವೆ.

## ೪. ಇತಿಹಾಸ ಆರಂಭಕಾಲ

ಮಾನವನು ಜೀವನದ ವಿವಿಧ ನಾಗರಿಕತೆಗಳ ಹಂತದಿಂದ ಲಿಪಿ ಬಳಕೆಗೆ ಬಂದ ಹಂತವನ್ನು ಇತಿಹಾಸ ಆರಂಭ ಕಾಲವೆಂದು ಗುರುತಿಸಬಹುದು. ಕರ್ನಾಟಕದ ದಕ್ಷಿಣ ಭಾಗದವರೆಗೆ ಮೌರ್ಯ ಸಾಮ್ರಾಜ್ಯದ ಪ್ರಾಬಲ್ಯ ವ್ಯಾಪಿಸಿದ್ದ ಬಗೆಗೆ ಅಲ್ಲಲ್ಲಿ ದೊರೆತಿರುವ ಶಿಲಾ ಲಿಪಿಗಳು ಹಾಗೂ ವಾಸ್ತು ಅವಶೇಷಗಳು ದೃಢಪಡಿಸಿವೆ.[೨೩] ಬಾಗಳಿಯಲ್ಲಿ[೨೪] ಇಟ್ಟಿಗೆ ಕಟ್ಟಡ ಹಾಗೂ ದೇವಾಲಯದ ಅವಶೇಷಗಳು ದೊರೆತಿವೆ.

## ಮೌರ್ಯರು

ಮೌರ್ಯರು ಕ್ರಿ.ಪೂ.೨ನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ್ದಾರೆ ಎಂಬುದಕ್ಕೆ ಕರ್ನಾಟಕದಲ್ಲಿ ಐದು ಜಿಲ್ಲೆಗಳಲ್ಲಿ ಇವರ ಶಾಸನಗಳು ಲಭ್ಯವಾಗಿರುವುದು ಸಾಕ್ಷಿಯಾಗಿದೆ. ಅವುಗಳೆಂದರೆ ಗುಲ್ಬರ್ಗ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಸನ್ನತಿ, ರಾಯಚೂರು ಜಿಲ್ಲೆಯ ಮಸ್ಕಿ, ಕೊಪ್ಪಳ ಜಿಲ್ಲೆಯ ಗವಿಮಠ ಮತ್ತು ಪಾಲ್ಕಿಗೊಂಡ, ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದೇಗೊಳಂ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ದಾಪುರ ಮತ್ತು ಜಟ್ಟಿಂಗ ರಾಮೇಶ್ವರ,[೨೫] ದಾವಣಗೆರೆ ಜಿಲ್ಲೆಯ ಜಗಳೂರು ತಾಲೂಕಿನ ಆಸಗೋಡು ಈ ಪ್ರದೇಶವನ್ನು ಹಿಂದೆ 'ಅಶೋಕ ಪಟ್ಟಣ'ವೆಂದು ಕರೆಯುತ್ತಿತ್ತು. ಇಲ್ಲಿ ಬೌದ್ಧ ಧರ್ಮ ಅನುಯಾಯಿಗಳು ಇದ್ದುದರ ಬಗ್ಗೆ ಸೂಚನೆಗಳಿವೆ.[೨೬] ದಾವಣಗೆರೆ ಸಮೀಪದ ಶಾಮನೂರು, ಬೇಲೂರುಗಳಲ್ಲಿ ಬೌದ್ಧರ ಕೆಲವು ಅವಶೇಷಗಳು ದೊರೆಯುತ್ತವೆ.[೨೭] ಈ ಸ್ಥಳಗಳಲ್ಲಿ ಮೌರ್ಯರ ಅವಶೇಷಗಳು ಲಭ್ಯವಾಗಿರುವುದರಿಂದ ನೀಲಗುಂದ ಪರಿಸರದಿಂದ ಸುಮಾರು ೩೫ ಕಿ.ಮೀ. ದೂರದ ಜಗಳೂರು ತಾಲ್ಲೂಕಿನಲ್ಲಿ ಇದರ ಅವಶೇಷಗಳು ಕಂಡುಬಂದಿರುವುದರಿಂದ ಈ ಪರಿಸರವು ಮೌರ್ಯರ ಆಳ್ವಿಕೆಗೆ ಒಳಪಟ್ಟಿರಬಹುದು.

## ಶಾತವಾಹನರು

ಮೌರ್ಯರ ಪತನಾನಂತರ ಆಳ್ವಿಕೆಗೆ ಬಂದವರೆಂದರೆ ಶಾತವಾಹನರು. ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶದ ಬಹುಭಾಗವು ಶಾತವಾಹನರ ನಿಯಂತ್ರಣದಲ್ಲಿತ್ತು. ಕರ್ನಾಟಕದಲ್ಲಿ ಶಾತವಾಹನರ ವಾಸ್ತು ಶಿಲ್ಪದ ಬಗ್ಗೆ ಈಗ ನಮಗೆ ತಿಳಿದುಬಂದಿರುವುದು ಅತ್ಯಲ್ಪ. ಬಾದಾಮಿ, ಐಹೊಳೆ, ಪಟ್ಟದಕಲ್ಲು, ವಡಗಾಮವಾಧವ ಪುರ, ಬ್ರಹ್ಮಗಿರಿ, ಚಂದ್ರವಳ್ಳಿ, ಸನ್ನತಿ ಇತ್ಯಾದಿ ಸ್ಥಳಗಳಲ್ಲಿಯ ಉತ್ಖನನದಿಂದ ಅವರ ಕಾಲದ ಕಟ್ಟಡಗಳು, ಅವಶೇಷಗಳು, ಮಡಿಕೆ ಪಾತ್ರೆಗಳು, ಜೇಡಿಮಣ್ಣಿನಿಂದ ನಿರ್ಮಾಣವಾದ ಶಿಲ್ಪಗಳು ಮತ್ತು ನಾಣ್ಯಗಳು ಬೆಳಕಿಗೆ ಬಂದಿವೆ.[೨೮]

ಬಳ್ಳಾರಿ ಸುತ್ತಮುತ್ತಲಿನ ಪರಿಸರದಲ್ಲಿ ಬರುವ ಪುಲುಮಾಯಿ ಮೆಕದೋಣಿ ಮತ್ತು ಹಿರೇಹಡಗಲಿಗಳಲ್ಲಿ ಶಾತವಾಹನರ ಆಳ್ವಿಕೆಯ ಕಾಲದ ಶಾಸನಗಳು ಕಂಡುಬಂದಿವೆ.[೨೯] ಅಲ್ಲದೆ ಜಗಳೂರು ತಾಲ್ಲೂಕಿನ ಆತನೂರು ಗ್ರಾಮದ ಬಳಿ ಅದೇ ಕಾಲದ ಬಿಳಿ ಬಣ್ಣದ ರೇಖಾಚಿತ್ರಗಳನ್ನೊಳಗೊಂಡ ಮಡಿಕೆಗಳು ದೊರೆತಿವೆ.[೩೦] ಸಂಡೂರು ಪರಿಸರದಲ್ಲಿ ಬರುವ ದೇವಗಿರಿ, ಚೋರನೂರು, ಕೂಡ್ಲಿಗಿ, ಹಾಳುತಿಮ್ಮಲಾಪುರ, ಕೊಟ್ಟೂರು, ಶಿವಪುರ, ಹೆಗ್ಡಾಳು, ಕೋಗಳಿ ಮುಂತಾದ ಸ್ಥಳಗಳಲ್ಲಿ ಶಾತವಾಹನರ ಅವಶೇಷಗಳು ದೊರೆತಿವೆ.[೩೧] ಶಾತವಾಹನರ ಕಾಲದ ದೇವಾಲಯ, ಶಾಸನ ಮತ್ತು ಇನ್ನಾವುದೇ ಆಧಾರಗಳು ಈ ಅಧ್ಯಯನ ಕ್ಷೇತ್ರದಲ್ಲಿ ಕಂಡುಬಂದಿದ್ದರೂ ನೀಲಗುಂದ ಇಲ್ಲಿಗೆ ಅವನತಿ ದೂರದಲ್ಲಿರುವುದರಿಂದ ಶಾತವಾಹನರ ಆಳ್ವಿಕೆಗೆ ಒಳಪಟ್ಟಿರಬಹುದೆಂದು ಊಹಿಸಬಹುದು.

### ಕದಂಬರು

ಶಾತವಾಹನರ ನಂತರ ಆಳ್ವಿಕೆಗೆ ಬಂದ ಮನೆತನವೆಂದರೆ ಬನವಾಸಿ ಕದಂಬರು. ಇವರು ಕ್ರಿ.ಶ.೪ ರಿಂದ ೬ನೇ ಶತಮಾನವರೆಗೆ ಆಳ್ವಿಕೆ ನಡೆಸಿದರು. ಇವರು ಪಶ್ಚಿಮದ ಕಡಲಿನಿಂದ ಬಳ್ಳಾರಿ ಜಿಲ್ಲೆಯ ಈಗಿನ ದಾವಣಗೆರೆ ಜಿಲ್ಲೆಯಲ್ಲಿ ಬರುವ ಉಚ್ಚಂಗಿ ದುರ್ಗದವರೆಗೂ ಸಾಮ್ರಾಜ್ಯ ವಿಸ್ತರಿಸಿದರು. ಇದಕ್ಕೆ 'ಬನವಾಸಿ ೧೨೦೦೦'ವೆಂದು ಕರೆದರು. ನೀಲಗುಂದ ಪರಿಸರದಲ್ಲಿ ಬರುವ ಉಚ್ಚಂಗಿದುರ್ಗ ಇವರ ಪೂರ್ವ ಶಾಖೆಯಾಗಿತ್ತು.[೬೨] ಇವರ ಕಾಲದಲ್ಲಿ ನಿರ್ಮಾಣಗೊಂಡ ಹರಿಹರದಲ್ಲಿರುವ ಹರಿಕೇಶ್ವರ ದೇವಾಲಯದ ಶಾಸನವೊಂದು ಕದಂಬ ವಂಶದ ಹಿನ್ನೆಲೆಯನ್ನು ವರ್ಣಿಸುತ್ತದೆ.[೬೩] ಈ ಹಿನ್ನೆಲೆಯಲ್ಲಿ ನೀಲಗುಂದ ಪರಿಸರವು ಬನವಾಸಿ ಕದಂಬರ ಆಡಳಿತಕ್ಕೆ ಒಳಪಟ್ಟಿರಬಹುದೆಂದು ಹೇಳಲಾಗಿದೆ.

### ಬಾದಾಮಿ ಚಾಲುಕ್ಯರು

ಬಾದಾಮಿ ಚಾಲುಕ್ಯರು ಕದಂಬರ ಪತನಾನಂತರ ಅಸ್ತಿತ್ವಕ್ಕೆ ಬಂದರು. ಬಾಗಲಕೋಟೆ ಜಿಲ್ಲೆಯಲ್ಲಿನ ಬಾದಾಮಿಯನ್ನು ಆಡಳಿತದ ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದರು.[೬೪] ಬಾದಾಮಿಯನ್ನು ಆಳಿದ್ದರಿಂದ ಇವರನ್ನು ಬಾದಾಮಿ ಚಾಲುಕ್ಯರೆಂದು ಕರೆಯಲಾಗಿದೆ.

ಬಾದಾಮಿ ಚಾಲುಕ್ಯರು ಈ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸಿದರೂ ಅವರ ಕಾಲದ ವಾಸ್ತುಶಿಲ್ಪ ಈ ಪರಿಸರದಲ್ಲಿ ವಿರಳ. ವಿನಯಾದಿತ್ಯನ ಕ್ರಿ.ಶ.೬೮೬ರ ತಾಮ್ರಪಟದಲ್ಲಿ 'ಪಂಪಾತಟ ಮಧಿವಸತಿ ವಿಜಯ ಸ್ಕಂದವಾರೆ' ಎಂದಿದೆ. ಇದರಿಂದ ವಿಜಯದ ಬಿಡಾರವನ್ನು ಪಂಪಾನದಿ ದಂಡೆ ಮೇಲೆ ವಿನಯಾದಿತ್ಯನು ಬಿಟ್ಟದ್ದಾಗಿ ತಿಳಿದುಬರುತ್ತದೆ.[೬೫] ಸಂಡೂರು ಪರಿಸರದಲ್ಲಿ ಬರುವ ಕುಮಾರ ಸ್ವಾಮಿಬೆಟ್ಟದ ಪಾರ್ವತಿ ದೇವಾಲಯ, ಹಗರಿಬೊಮ್ಮನಹಳ್ಳಿ ಪರಿಸರದಲ್ಲಿ ಬರುವ ಉತ್ತಂಗಿಯ ವಿಷ್ಣುಶಿಲ್ಪ[೬೬] ಹಾಗೂ ಹರಿಹರದ ಹರಿಹರೇಶ್ವರ ದೇವಾಲಯದಲ್ಲಿ ವಿನಯಾದಿತ್ಯನ ಶಾಸನ[೬೭] ದೊರೆತಿರುವುದರಿಂದ ನೀಲಗುಂದ ಪರಿಸರದಿಂದ ೨೦ ಕಿ.ಮೀ. ಸಮೀಪದಲ್ಲಿ ಇರುವುದರಿಂದಾಗಿ(ಕಾಲದ ಶಾಸನ ದೊರೆಯುತ್ತಿರುವುದರಿಂದ  ಈ ಮೇಲಿನ ಪ್ರದೇಶಗಳು ಅಧ್ಯಯನ ಕ್ಷೇತ್ರಕ್ಕೆ ನೀಲಗುಂದ ಪರಿಸರದಲ್ಲಿ ಬಾದಾಮಿ ಚಾಲುಕ್ಯರ ಆಳ್ವಿಕೆ ಇದ್ದಿತ್ತೆಂದು ಗ್ರಹಿಸಬಹುದು.

### ಗಂಗರು

ಕರ್ನಾಟಕದ ಇತಿಹಾಸದಲ್ಲಿ ಗಂಗವಂಶದ ಅರಸರದು ವಿಶಿಷ್ಠ ಸ್ಥಾನ. ಕನ್ನಡದ ಸಂಸ್ಕೃತಿಗೆ ಇವರು ತಮ್ಮದೇ ಆದ ಕಾಣಿಕೆಯನ್ನು ನೀಡಿದ್ದಾರೆ. ಈ ಗಂಗರ ಆಳ್ವಿಕೆಗೆ ಕೆಲವು ವರ್ಷಗಳ ಮಟ್ಟಿಗಾದರೂ ಬಳ್ಳಾರಿ ಜಿಲ್ಲೆ ಒಳಪಟ್ಟಿತ್ತೆಂಬುದನ್ನು ಶಾಸನಗಳು ನಿರೂಪಿಸುತ್ತವೆ. ಹಗರಿ ಬೊಮ್ಮನಹಳ್ಳಿ ಪರಿಸರದಲ್ಲಿ ಬರುವ ಕೋಗಳಿ ಕ್ರಿ.ಶ.೧೦೫೫ರ ಶಾಸನದಲ್ಲಿ ಗಂಗದೊರೆ ದುರ್ವಿನೀತನು ಕೋಗಳಿಯಲ್ಲಿ

ಬಸದಿಯೊಂದನ್ನು ನಿರ್ಮಿಸಿದ ಬಗ್ಗೆ ಉಲ್ಲೇಖವಿದೆ.[೩೭] ಅಂಬಳಿ ಗ್ರಾಮದ ಒಡೆಯನಾದ 'ಪಶುಪತಿ ಭಟ್ಟ'ನೆಂಬಾತನಿಗೆ ದುರ್ವಿನೀತ ಗಂಗನು ಪರಮಾದರದಿಂದ ರಾಜ್ಯ ಚಿಹ್ನೆಗಳನ್ನು ಕೊಡುತ್ತಾನೆ. ಇದರಿಂದ ಪಶುಪತಿಭಟ್ಟನು ಗಂಗದೊರೆಗೆ ಯಾವುದೋ ಒಂದು ಮಹತ್ತರವಾದ ಸಾಧನೆಗೈಯುವಲ್ಲಿ ನೆರವಾಗಿದ್ದಾನೆ.[೩೮] ಇದರಿಂದ ದುರ್ವಿನೀತನ ಆಳ್ವಿಕೆಗೆ ಬಳ್ಳಾರಿ ಜಿಲ್ಲೆ ಒಳಪಟ್ಟಿತ್ತೆಂಬುದು ಸ್ಪಷ್ಟವಾಗುತ್ತದೆ.

### ಪಲ್ಲವರು

ಶಾತವಾಹನರ ಬಳಿಕ ಪಲ್ಲವರು ಬಳ್ಳಾರಿ ಸುತ್ತಮುತ್ತಲಿನ ಪ್ರದೇಶಗಳನ್ನು ಆಳ್ವಿಕೆ ಮಾಡಿದರೆಂಬುವುದಕ್ಕೆ ಹಿರೇ ಹಡಗಲಿಯಲ್ಲಿ ದೊರೆತ ಪ್ರಾಕೃತ ಶಾಸನವು ಪ್ರಮಾಣವಾಗುವುದು. ಆಗಿನ ಬಳ್ಳಾರಿ ಪರಿಸರಕ್ಕೆ ಸೇರಿದ ಆಲೂರು ತಾಲ್ಲೂಕಿನ ಮ್ಯಾಕದೋಣಿ ಶಾಸನವೊಂದು ಪಲ್ಲವರ ಆಡಳಿತದ ಬಗ್ಗೆ ಉಲ್ಲೇಖಿಸುತ್ತದೆ.[೩೯] ಹಾಗೂ ದಾವಣಗೆರೆ ಪರಿಸರದಲ್ಲಿ ಬರುವ ಅಣಜಿ ಶಾಸನದಲ್ಲಿ ನಣಕ್ಕಸ ಪಲ್ಲವನ ಉಲ್ಲೇಖವಿರುವುದರಿಂದ ಪಲ್ಲವರು ಈ ಪ್ರದೇಶದಲ್ಲಿ ಕೆಲವು ಕಾಲ ನೆಲೆಸಿರಬೇಕು.[೪೦] ಆದುದರಿಂದ ನೀಲಗುಂದ ಪರಿಸರವು ಇವರ ಅಧೀನಕ್ಕೆ ಒಳಗಾಗಿರಬಹುದು.

### ರಾಷ್ಟ್ರಕೂಟರು

ಬಾದಾಮಿ ಚಾಲುಕ್ಯರ ಪತನದ ನಂತರ ಆಡಳಿತಕ್ಕೆ ಬಂದವರು ರಾಷ್ಟ್ರಕೂಟರು. ಇವರು ಚಾಲುಕ್ಯರಂತೆ ಮೂಲತಃ ಕನ್ನಡಿಗರೆಂದು ಡಾ. ಅಲ್ಟೇಕರ್‌ರು ಅಭಿಪ್ರಾಯ ಪಡುತ್ತಾರೆ.[೪೧] ಇವರು ಗುಲ್ಬರ್ಗ ಜಿಲ್ಲೆಯ ಮಾನ್ಯಖೇಟವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದಾರೆ. ಕರ್ನಾಟಕ, ಮಹಾರಾಷ್ಟ್ರ, ಗುಜರಾತ್, ಮಧ್ಯಪ್ರದೇಶದ ಪ್ರಾಂತ್ಯಗಳೆಲ್ಲವು ರಾಷ್ಟ್ರಕೂಟರ ಅಧೀನಕ್ಕೊಳಪಟ್ಟಿದ್ದವು.[೪೨] ಈ ಮನೆತನದ ರಾಜನಾದ ಧ್ರುವನ ಮಗನಾದ ಮುಮ್ಮಡಿ ಗೋವಿಂದನು ಚಿತ್ರದುರ್ಗ, ತುಮಕೂರು, ಬಳ್ಳಾರಿ ಜಿಲ್ಲೆಯ ಕೆಲವು ಪ್ರದೇಶವನ್ನೊಳಗೊಂಡ ನೊಳಂಬವಾಡಿಯನ್ನು ಜಯಸಿದನು. ಕ್ರಿ.ಶ.೭೫೩ರಲ್ಲಿ ಬಾದಾಮಿ ಚಾಲುಕ್ಯ ವಂಶದ ಕೀರ್ತಿವರ್ಮನನ್ನು ಸೋಲಿಸಿ ಅಧಿಕಾರಕ್ಕೆ ಬಂದನು. ಈ ವಂಶದ ಚಕ್ರವರ್ತಿಗಳು ಬಳ್ಳಾರಿ ಜಿಲ್ಲೆಯ ದೇವಾಲಯಗಳಿಗೆ ದಾನ-ದತ್ತಿ ಬಿಟ್ಟಿದ್ದರೆಂಬುದನ್ನು ಇಲ್ಲಿ ದೊರೆತ ಹಲವಾರು ಶಾಸನಗಳು ತಿಳಿಸುತ್ತವೆ.[೪೩]

ರಾಷ್ಟ್ರಕೂಟರ ದೊರೆಗಳಲ್ಲಿ ಪ್ರಸಿದ್ಧನಾದವನು ಮೂರನೆಯ ಕೃಷ್ಣ. ಇವನ ನಾಲ್ಕು ಶಾಸನಗಳು ಈ ಜಿಲ್ಲೆಯಲ್ಲಿ ದೊರೆಯುತ್ತವೆ.[೪೪] ಬಾಗಳಿಯ ಕಲ್ಲೇಶ್ವರ ದೇವಾಲಯದ ಶಾಸನವು ಮೂರನೇ ಕೃಷ್ಣನ ಬಗ್ಗೆ ಉಲ್ಲೇಖಿಸುತ್ತದೆ. ನೀಲಗುಂದ ಪರಿಸರದಲ್ಲಿ ಬರುವ ಚಿರಸ್ತಹಳ್ಳಿ[೪೫] ಗ್ರಾಮದ ಶಂಕರಲಿಂಗ ದೇವಾಲಯದ ಬಳಿ ದೊರೆತಿರುವ ಕ್ರಿ.ಶ.೯೩೨ರ ಶಾಸನದಲ್ಲಿ ಒಬ್ಬ ಯುದ್ಧ ಭಟ್ಟನಾದ `ಪಡಿಗನೊಂಬಾ` ಎಂಬ ವೀರನು ಗ್ರಾಮದ ರಕ್ಷಣೆಗಾಗಿ ಹೋರಾಡಿ ಮರಣ ಹೊಂದಿದಾಗ ಮಾಸವಾಡಿ ೧೪೦ ಮತ್ತು

ಕೋಗಳಿ ನಾಡನ್ನು ಅಯ್ಯಪ್ಪಯ್ಯನು ಮೃತನ ಕುಟುಂಬಕ್ಕೆ ನೀರಾವರಿ ಮತ್ತು ಒಣಭೂಮಿಯನ್ನು ದಾನ ನೀಡಿರುವುದು ಉಲ್ಲೇಖವಾಗಿರುವುದರಿಂದ ನೀಲಗುಂದ ಪರಿಸರ ಇವರ ಆಳ್ವಿಕೆಗೆ ಒಳಪಟ್ಟಿರಬಹುದು.

## ಕಲ್ಯಾಣಿ ಚಾಲುಕ್ಯರು

ಈ ವಂಶದ ಇಮ್ಮಡಿ ತೈಲಪನು ರಾಷ್ಟ್ರಕೂಟರ ಆಳ್ವಿಕೆಯನ್ನು ಕೊನೆಗೊಳಿಸಿ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸಾಮ್ರಾಜ್ಯವನ್ನು ಸ್ಥಾಪಿಸಿದನು.[೪೬] ಇವರ ಕಾಲವನ್ನು ಕರ್ನಾಟಕ ಚರಿತ್ರೆಯ ಪ್ರಮುಖ ಘಟ್ಟವೆಂದು ಹೇಳಬಹುದು. ಇವರ ಆಡಳಿತ ಅವಧಿಯಲ್ಲಿ ನಿರ್ಮಾಣವಾದ ಸಾವಿರಾರು ಶಾಸನಗಳು ಲಭ್ಯವಾಗಿವೆ. ಅಲ್ಲದೆ ವಾಸ್ತುಶಿಲ್ಪ ಕಲೆಯು ಶಾಸ್ತ್ರೀಯವಾಗಿ ಬೆಳೆದು ಹೆಚ್ಚು ಪ್ರಸಿದ್ಧಿಯನ್ನು ಪಡೆದ ದೇವಾಲಯಗಳು, ಬಸದಿಗಳು ಇವರ ಕಾಲದಲ್ಲಿ ನಿರ್ಮಾಣಗೊಂಡಿವೆ. ಅಲ್ಲದೆ ಹಲವಾರು ಸಾಹಿತ್ಯಿಕ ಕೃತಿಗಳು ಚರಿತ್ರೆಯಲ್ಲಿ ರಚನೆಯಾಗಿರುವುದು ಕಂಡುಬರುತ್ತವೆ.[೪೭]

ಈ ಪರಿಸರದ ಬಾಗಳಿಯಲ್ಲಿ ಅತಿಹೆಚ್ಚು ಶಾಸನಗಳು ದೊರೆತಿವೆ. ದೇವಾಲಯಗಳು ನಿರ್ಮಾಣಗೊಂಡಿರುವುದನ್ನು ಗಮನಿಸಬಹುದು.[೪೮] ನೀಲಗುಂದ ಪರಿಸರದಲ್ಲಿ ಅನೇಕ ದೇವಾಲಯಗಳು ಇವರ ಆಳ್ವಿಕೆ ಕಾಲದಲ್ಲಿ ನಿರ್ಮಾಣಗೊಂಡಿವೆ. ಭೀಮೇಶ್ವರ ದೇವಾಲಯ ಲಕ್ಷ್ಮೀನಾರಾಯಣ ಅನಂತಶಯನ, ಕುಂಚೂರು ಕಲ್ಲೇಶ್ವರ, ಹಲುವಾಗಲು ಕಲ್ಲೇಶ್ವರ, ಚಿರಸ್ತಹಳ್ಳಿ ಕಲ್ಲೇಶ್ವರ ಮುಂತಾದವುಗಳು ಕಂಡುಬಂದಿವೆ. ಶಾಸನಗಳ ದೃಷ್ಟಿಯಲ್ಲಿ ಇವರ ದಾನ-ದತ್ತಿ ವಿಚಾರಕ್ಕೆ ಸಂಬಂಧಿಸಿದಂತೆ ಹಲವಾರು ಶಾಸನಗಳು ಉಲ್ಲೇಖವಾಗಿವೆ.

ನೀಲಗುಂದ ಭೀಮೇಶ್ವರ ದೇವಾಲಯ ಆವರಣದಲ್ಲಿ ಚಾಲುಕ್ಯ ರಾಜ ತ್ರಿಭುವನ ಮಲ್ಲದೇವನು ಕಲ್ಯಾಣದಲ್ಲಿ ಆಳುತ್ತಿರಲು ಇವನ ದಂಡನಾಯಕನಾದ ಅನಂತ ಪಾಲಯ್ಯ ಮತ್ತು ಮುದ್ದರಸನು ಈ ದೇವರಿಗೆ ಕೆಲವು ತೆರಿಗಳನ್ನು ದಾನ ನೀಡಿದ ಉಲ್ಲೇಖವಿದೆ.[೪೯] ಚಿರಸ್ತಹಳ್ಳಿ,[೫೦] ಕುಂಚೂರು,[೫೧] ಇವರ ಶಾಸನಗಳು ದೊರೆಯುವುದರಿಂದ ಈ ಪ್ರದೇಶವು ಅವರ ಅಧೀನದಲ್ಲಿತ್ತೆಂದು ದೃಢಪಡಿಸಲಾಗಿದೆ.

## ನೊಳಂಬರು

ನೊಳಂಬರು ಅಥವಾ ಪಲ್ಲವರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರ ಅಧೀನರಾಗಿ ಕ್ರಿ.ಶ.೮ನೇ ಶತಮಾನದಿಂದ ೧೧ನೇ ಶತಮಾನದವರಿಗೆ ಬಳ್ಳಾರಿ ಪ್ರದೇಶವನ್ನೊಳಗೊಂಡ ನೊಳಂಬವಾಡಿ ನಾಡನ್ನು ಆಳುತ್ತಿದ್ದರು. ತಾವು ಆಳುತ್ತಿದ್ದ ಪ್ರದೇಶವನ್ನು ೩೨೦೦೦ ಎಂಬ ಹೆಸರಿನಿಂದಲೇ ಗುರುತಿಸಿಕೊಂಡಿದ್ದಾರೆ. ಗಂಗರ ಮತ್ತು ರಾಷ್ಟ್ರಕೂಟರ ವೈರಿಗಳಾಗಿದ್ದ ಕಲ್ಯಾಣ ಚಾಲುಕ್ಯರ ಸ್ನೇಹವನ್ನು ಬೆಳೆಸುವುದರೊಂದಿಗೆ ಹೊಸಪೇಟೆ ತಾಲ್ಲೂಕಿನ ಕಂಪ್ಲಿಯನ್ನು ರಾಜಧಾನಿಯಾಗಿ ಮಾಡಿಕೊಂಡು, ಆಳ್ವಿಕೆ ಪ್ರಾರಂಭಿಸಿದರು. ನಂತರ ಇವರು ತಮ್ಮ ರಾಜಕೀಯ ಸ್ಥಾನವನ್ನು ಗಟ್ಟಿಗೊಳಿಸಿಕೊಂಡರು. ತಮ್ಮನ್ನು ಪಲ್ಲವಾನ್ವಯ, ಪಲ್ಲವ ಕುಲತಿಳಕ, ಕಾಂಚಿಪುರವರಾಧೀಶ್ವರ ಮುಂತಾದ ಬಿರುದುಗಳೊಂದಿಗೆ ಗುರುತಿಸಿಕೊಂಡಿದ್ದಾರೆ.[೫೨]

ನೊಳಂಬರು ತೊಂಬತ್ತು ವರ್ಷಗಳ ಕಾಲ ಚಾಲುಕ್ಯರ ಸಾಮಂತರಾಗಿ ತಮ್ಮ ಸುತ್ತಮುತ್ತಲಿನ ಪ್ರದೇಶಗಳನ್ನು ತಮ್ಮ ಆಡಳಿತ ವಿಭಾಗಕ್ಕೆ ಸೇರಿಸಿಕೊಂಡಿದರು.[೫೩] ನೀಲಗುಂದ ಪರಿಸರದಲ್ಲಿ ಹಲವಾರು ಶಾಸನಗಳು ದೊರೆತಿವೆ. ಕೆರೆಗುಡಿಹಳ್ಳಿ, ಅರಸೀಕೆರೆ, ಬಾಗಳಿ, ಕಡಬಗೆರೆ, ಹಿರೇಮ್ಯಾಗಳಗೇರಿ, ತೆಲಗಿ, ತಲವಾಗಲು, ಕಂಚಿಕೆರೆ, ಕೋಗಳಿ, ನಂದಿಬೇವೂರು ಮುಂತಾದ ಸ್ಥಳಗಳಲ್ಲಿ ಶಾಸನಗಳು ಲಭ್ಯವಾಗಿವೆ.[೫೪]

ಚಿರಸ್ತಹಳ್ಳಿ ಶಾಸನದಲ್ಲಿ ಇಮ್ಮಡಿ ನೊಳಂಬನು ಕೋಗಳಿ ೫೦೦ ಮತ್ತು ಕದಂಬಳಿ ನಾಡನ್ನು ಆಳುತ್ತಿದ್ದ ಮಲ್ಲಕಯ್ಯನು ಆದಿತ್ಯ, ಮಾತೃಕೆ, ವಿನಾಯಕ ಮುಂತಾದ ಪ್ರತಿಮೆಗಳನ್ನು ಮಾಡಿಸಿದ ಉಲ್ಲೇಖವಿದೆ.[೫೫] ನೀಲಗುಂದದ ಮುಕ್ತಿ ರಾಮೇಶ್ವರ ದೇವಾಲಯ ಶಾಸನದಲ್ಲಿ ತ್ರಿಭುವನ ಮಲ್ಲರಾಯ ಪಾಂಡ್ಯದೇವನು ಸ್ವಯಂಭುರಾಮೇಶ್ವರ ದೇವರ ಸೇವೆಗಾಗಿ ದಾನ ನೀಡಿದ ಉಲ್ಲೇಖ[೫೬] ಕಂಡುಬಂದಿರುವುದರಿಂದ ಈ ಪ್ರದೇಶವು ಅವರ ಅಧೀನದಲ್ಲಿತ್ತೆಂದು ಹೇಳಲಾಗಿದೆ.

## ಪಾಂಡ್ಯರು

ಉಚ್ಚಂಗಿಯ ಪಾಂಡ್ಯರು ಕಲ್ಯಾಣ ಚಾಲುಕ್ಯರ ಚಕ್ರವರ್ತಿಗಳಿಗೆ ಸಾಮಂತ ಅರಸರಾಗಿದ್ದರು. ಅನೇಕ ಯುದ್ಧಗಳಲ್ಲಿ ಭಾಗವಹಿಸಿ ತಮ್ಮ ಅರಸರಿಗೆ ಜಯ ತಂದುಕೊಟ್ಟ ರಾಜರ ಮೆಚ್ಚಿಗೆ ಪಡೆದು ನಂಬಿಕೆಯ ಸಾಮಂತರಾಗಿದ್ದರು. ಇವರು ಉಚ್ಚಂಗಿಯೆಂಬ ಮುಖ್ಯಪಟ್ಟಣದಿಂದ ನೊಳಂಬವಾಡಿಯನ್ನು ಆಳುತ್ತಿದ್ದರು. ನೊಳಂಬರ ತರುವಾಯ ಬಳ್ಳಾರಿಯ ಪ್ರದೇಶದಲ್ಲಿ ಪ್ರಬಲವಾಗಿ ಬೆಳೆದವರು.[೫೭] ಇವರು ಕ್ರಿ.ಶ.೧೦೭೬ ರಿಂದ ೧೨೦೦ನೇ ಶತಮಾನ ಅಂತ್ಯದವರಿಗೂ ಆಳ್ವಿಕೆ ನಡೆಸುತ್ತ ಪಕ್ಕದ ಗುಪ್ತರಾಜರೊಡನೆ ವೈವಾಹಿಕ ಸಂಬಂಧ ಬೆಳೆಸುವ ಮೂಲಕ ತಮ್ಮ ರಾಜ್ಯದ ಎಲ್ಲೆಗಳನ್ನು ವಿಸ್ತರಿಸಿದರು.[೫೮]

ಇವರ ಆಳ್ವಿಕೆಯ ಕಾಲದ ಅನೇಕ ಶಾಸನಗಳು ಈ ಪರಿಸರದಲ್ಲಿ ಕಂಡುಬಂದಿವೆ. ಹಲವಾರು ರಾಜರ ಹೆಸರುಗಳು ಉಲ್ಲೇಖವಾಗಿವೆ. ಬಾಗಳಿ ಶಾಸನದಲ್ಲಿ ತ್ರಿಭುವನ ರಾಯನ ಪ್ರಸ್ತಾಪವಿದೆ. ಚಟ್ನಹಳ್ಳಿ ಶಾಸನದಲ್ಲಿ ವೀರಪಾಂಡ್ಯದೇವನ ಪ್ರಸ್ತಾಪವಿದೆ.[೫೯] ನೀಲಗುಂದ ಶಾಸನದಲ್ಲಿ[೬೦] ತ್ರಿಭುವನ ಮಲ್ಲರಾಯ ಪಾಂಡ್ಯನ ಉಲ್ಲೇಖವಿದೆ. ಕುಂಚೂರು ಶಾಸನದಲ್ಲಿ ತ್ರಿಭುವನ ಪಾಂಡ್ಯ ದೇವನ ಹೆಸರು ಉಲ್ಲೇಖವಿದೆ. ಉಚ್ಚಂಗಿ ದುರ್ಗ, ದುಗ್ಗವತಿ, ಅಲಗಿಲವಾಡ ಶಾಸನಗಳಲ್ಲಿ[೬೧] ವಿಜಯಪಾಂಡ್ಯದೇವನ ಉಲ್ಲೇಖವಿದೆ. ಹಾಗಾಗಿ ಈ ಪ್ರದೇಶವು ಅವರ ಅಧೀನಕ್ಕೆ ಒಳಗಾಗಿರಬಹುದೆಂದು ಹೇಳಬಹುದು.

## ಕಲಚೂರ್ಯರು

ಕಲ್ಯಾಣ ಚಾಲುಕ್ಯರ ಆಳ್ವಿಕೆ ಮುಗಿದ ನಂತರ ಅಧಿಕಾರಕ್ಕೆ ಬಂದವರು ಕಲಚೂರ್ಯರು. ಇವರು ಚಾಲುಕ್ಯರನ್ನು ಮೂಲೆಗುಂಪು ಮಾಡಿ ೩೫ ವರ್ಷಗಳ ಕಾಲ ರಾಜ್ಯಭಾರ ಮಾಡಿದರು. ಈ ಪ್ರದೇಶದಲ್ಲಿ ಇವರ ವಾಸ್ತುಶಿಲ್ಪಕಲೆ ಅತಿವಿರಳ. ಕಲಚೂರ್ಯರ ಸಾಮಂತರು, ಮಹಾಮಂಡಳೇಶ್ವರರು ಅಥವಾ

ಅಧಿಕಾರಿಗಳು ದೇವಾಲಯಗಳನ್ನು ನಿರ್ಮಿಸಿದರು. ಈ ಹಿಂದೆ ನಿರ್ಮಾಣವಾದ ದೇವಾಲಯಗಳಿಗೆ ದಾನ-ದತ್ತಿಗಳನ್ನು ಬಿಡುವ ಸಂಪ್ರದಾಯ ಮುಂದುವರಿಯಿತು. ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ಮಾಡುತ್ತಿದ್ದ ಪಾಂಡ್ಯರು ಮತ್ತು ಸಿಂದರು ಇವರ ಅಧೀನಕ್ಕೊಳಪಟ್ಟರು.[೬೨]

ಇವರ ಆಳ್ವಿಕೆಯ ಕಾಲದ ನಾಲ್ಕು ಶಾಸನಗಳು ಬಳ್ಳಾರಿ ಪರಿಸರದಲ್ಲಿ ದೊರೆತಿವೆ.[೬೩] ಇವೆಲ್ಲವೂ ಕ್ರಿ.ಶ.೧೧೬೨ರಿಂದ ೧೧೭೭ರ ಅವಧಿಯಲ್ಲಿ ರಚನೆಯಾಗಿವೆ. ಅಲ್ಲದೆ ನೀಲಗುಂದ ಪರಿಸರದ ನೀಲಗುಂದ ಭೀಮೇಶ್ವರ ದೇವಾಲಯದ ಆವರಣದಲ್ಲಿ ನಿಲ್ಲಿಸಿದ ಕ್ರಿ.ಶ.೧೧೬೨ರ ಶಾಸನದಲ್ಲಿ ಕೋಗಳಿ ೫೦೦ರ ಮುಖ್ಯ ಪಟ್ಟಣವಾದ ನೀರ್ಗ್ುಂದದ ಭೀಮೇಶ್ವರ ದೇವರಿಗೆ ಕೆಲವು ತೆರಿಗೆಗಳನ್ನು ದಾನ ನೀಡಿದ ಉಲ್ಲೇಖ ಕಂಡುಬರುತ್ತದೆ.[೬೪]

ಇದೇ ದೇವಾಲಯದ ಆವರಣದಲ್ಲಿರುವ ಇನ್ನೊಂದು ಶಾಸನದಲ್ಲಿ ಮಹಾಮಂಡಳೇಶ್ವರ ಬಿಜ್ಜಳರಸ ಅಚ್ಚುತದೇವರು ತಲವಾಗಿಲಹಳ್ಳಿಯನ್ನು ಹರಿಹರೇಶ್ವರ ದೇವರಿಗೆ ದಾನ ನೀಡಿದ ಉಲ್ಲೇಖವಿದೆ.[೬೫] ನೀಲಗುಂದ ಪರಿಸರವು ಅವರ ಆಡಳಿತಕ್ಕೆ ಒಳಪಟ್ಟಿತ್ತೆಂದು ಖಚಿತವಾಗಿ ಹೇಳಬಹುದು.

**ಯಾದವರು**

ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯ ಅವನತಿಯಾದ ನಂತರ ಯಾದವರು ಮಹಾರಾಷ್ಟ್ರದಲ್ಲಿರುವ ದೇವಗಿರಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರು. ಆರಂಭದಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳಿಗೆ ಮಹಾಮಂಡಳೇಶ್ವರರಾಗಿದ್ದರು(ಸಾಮಂತರಾಗಿ). ಕಳಚುರಿ ವಂಶದವರ ಆಳ್ವಿಕೆಯಲ್ಲಿ ಸ್ವಾತಂತ್ರ್ಯವನ್ನು ಘೋಷಿಸಿಕೊಂಡು ರಾಜ್ಯವಿಸ್ತರಣೆಗಾಗಿ ಹೊಯ್ಸಳರ ಜೊತೆ ಪೈಪೋಟಿಗೆ ಇಳಿದರು. ಇವರಿಗೂ ಹೊಯ್ಸಳರಿಗೂ ಅನೇಕ ಸಲ ಯುದ್ಧಗಳು ಜರುಗಿದವು. ಒಮ್ಮೆ ಯಾದವರಿಗೆ ಜಯ ಲಭಿಸಿದರೆ ಮತ್ತೊಮ್ಮೆ ಹೊಯ್ಸಳರಿಗೆ ಜಯ ಲಭಿಸುತ್ತಿತ್ತು.[೬೬]

ಯಾದವರ ಕಾಲದ ನೀಲಗುಂದ ಪರಿಸರದ ಬಾಗಳಿ ಶಾಸನವು ಶ್ರೀಮತ್ ಯಾದವ ನಾರಾಯಣ ಭುಜಬಲ ಪ್ರಥಮ ಚಕ್ರವರ್ತಿ ಶ್ರೀ ಕಂದ್ಧರದೇವನು ನೀಲಗುಂದ ಪ್ರದೇಶವನ್ನು ಆಳುತ್ತಿದ್ದುದನ್ನು ಹೇಳುತ್ತದೆ. ಕ್ರಿ.ಶ.೧೨೬೫ ಹಾಗು ೧೨೬೮ರಲ್ಲಿ ಮಹಾ ದೇವರಾಯ ಆಳುತ್ತಿದ್ದನೆಂದು ಚಿಮ್ಮನಹಳ್ಳಿ ಹಾಗೂ ಉಜ್ಜನಿಯ ಶಾಸನಗಳಲ್ಲಿ ಉಕ್ತವಾಗಿದೆ. ಚಿಮ್ಮನಹಳ್ಳಿ ಶಾಸನ ಮಹಾದೇವರಾಯನನ್ನು 'ಶ್ರೀಮತ್ ಯಾದವ ನಾರಾಯಣ ಭುಜಬಳ ಪ್ರೌಢ ಚಕ್ರವರ್ತಿ ಶ್ರೀ ವೀರಮಹಾದೇವರಾ' ಎಂದು ಕರೆದಿದೆ.[೬೭]

ರಾಮಚಂದ್ರದೇವನ ಎರಡು ಶಾಸನಗಳು ನೀಲಗುಂದ ಪರಿಸರದಲ್ಲಿ ಲಭ್ಯವಾಗಿದ್ದು, ಅವು ಕ್ರಮವಾಗಿ ಕ್ರಿ.ಶ.೧೨೭೯ ಮತ್ತು ೧೨೮೨ರ ಕಾಲಕ್ಕೆ ಸಂಬಂಧಿಸಿವೆ. ಇವುಗಳನ್ನು ಕ್ರಮವಾಗಿ ಕುಂಚೂರು,

ಹಲವಾಗಲು, ಗ್ರಾಮದ ಪ್ರಮುಖ ದೇವಾಲಯದಲ್ಲಿ ನಿಲ್ಲಿಸಲಾಗಿದೆ. ಇದರಲ್ಲಿ ಕುಂಚೂರು ಶಾಸನದಲ್ಲಿ ಶ್ರೀ ವೀರ ರಾಮಚಂದ್ರರಾಯನು ದೇವಗಿರಿಯ ನೆಲೆವೀಡಿನಲ್ಲಿ ಆಳುತ್ತಿದ್ದನೆಂದು ಹೇಳಲಾಗಿದೆ. ಹಲುವಾಗಲು ಶಾಸನದಲ್ಲಿ ಈತನು ಗೈದ ಸಾಹಸ ಪ್ರಶಸ್ತಿಗಳ ವಿವರವಿದ್ದು, ಆತನು ಶ್ರೀಪ್ರಥ್ವಿವಲ್ಲಭಂ, ಮಹಾರಾಜಾಧಿರಾಜಂ ಪರಮೇಶ್ವರಂ ಮುಂತಾದ ಬಿರುದುಗಳನ್ನು ಪಡೆದಿದ್ದನು. ಅಲ್ಲದೆ ಮಾಳವ, ಗೂರ್ಜರ, ತೆಲುಗು ರಾಜರೊಂದಿಗೆ ಯುದ್ಧ ಮಾಡಿದುದು ಮತ್ತು ಈತನ ಕಾಲದಲ್ಲಿ ತುರುಷ್ಕ ಮುಸಲ್ಮಾನ ದೊರೆಗಳ ಕಿರುಕುಳ ದಕ್ಷಿಣದ ಕಡೆಗೆ ಪ್ರಾರಂಭವಾದುದು ತಿಳಿದುಬರುತ್ತದೆ. ಅಲ್ಲದೆ ಈತನು ಹೊಯ್ಸಳರನ್ನು ಸೋಲಿಸಿ 'ಹೂಯಿಸಣರಾಯ ಸಾಮ್ರಾಜ್ಯ ಲಕ್ಷ್ಮೀಹರಣ" ಎಂಬ ಪ್ರಶಸ್ತಿ ಧರಿಸಿದ್ದುದು ಗೊತ್ತಾಗುತ್ತದೆ. ಈ ರಾಮಚಂದ್ರರಾಯನಲ್ಲಿದ್ದ ಸಕಲ ಸೈನ್ಯಾಧಿಪತಿ ಸರ್ವಾಧಿಕಾರಿಯು ಹಲುವಾಗಲು ಶ್ರೀ ಸ್ವಯಂಭು ಕಲ್ಲಿನಾಥ ದೇವರಿಗೆ ಗದ್ದೆ, ಬೆದ್ದಲ ಭೂಮಿಯನ್ನು ದಾನ ಬಿಡುತ್ತಾನೆ.[೧೮] ಕಡತಿ, ಮೈಲಾರ ಮುಂತಾದ ಸ್ಥಳಗಳಲ್ಲಿ ಯಾದವರ ಶಾಸನಗಳು[೧೯] ದೊರೆಯುವುದರಿಂದ ನೀಲಗುಂದ ಪರಿಸರ ಯಾದವರ ಅಧೀನದಲ್ಲಿತ್ತೆಂದು ಊಹಿಸಲಾಗಿದೆ.

## ಹೊಯ್ಸಳರು

ಚಾಲುಕ್ಯರ ಪತನದ ನಂತರ ಅಧಿಕಾರ ಪಡೆದುಕೊಂಡವರು ಹೊಯ್ಸಳರು. ಇವರು ದ್ವಾರಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು ಹೊಯ್ಸಳರು. ಆರಂಭದಲ್ಲಿ ಗಂಗರ, ಕಲ್ಯಾಣಿ ಚಾಲುಕ್ಯರ ಮಾಂಡಲೀಕರಾಗಿದ್ದು ಅವರ ಅಧೀನದಲ್ಲಿ ಸುಮಾರು ಒಂದು ಶತಮಾನ ಸಾಮಂತ ಅರಸರಾಗಿದ್ದರು.[೨೦] ಇವರ ಪ್ರಮುಖ ಅರಸನಾದ ವಿಷ್ಣುವರ್ಧನ ಮತ್ತು ವೀರಬಲ್ಲಾಳರ ಆಳ್ವಿಕೆಯಲ್ಲಿ ಸ್ವತಂತ್ರರಾಗಿ ಆಳ್ವಿಕೆ ನಡೆಸಿದರು.

ಹೊಯ್ಸಳರ ದೇವಾಲಯಗಳು ಕರ್ನಾಟಕದ ಅನೇಕ ಭಾಗಗಳಲ್ಲಿ ಕಂಡುಬಂದರೂ ಅವು ಹೆಚ್ಚಾಗಿ ಹಾಸನ, ಚಿಕ್ಕಮಗಳೂರು, ತುಮಕೂರು, ಚಿತ್ರದುರ್ಗ, ಶಿವಮೊಗ್ಗ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಕೇಂದ್ರೀಕೃತವಾಗಿವೆ. ಈ ಪ್ರದೇಶದ ಕೆಲವು ಭಾಗಗಳು ಇವರ ಆಳ್ವಿಕೆಗೆ ಒಳಪಟ್ಟಿದ್ದರೂ ಇಲ್ಲಿ ಅವರ ಕಾಲದ ದೇವಾಲಯಗಳು ಅತಿ ವಿರಳವಾಗಿ ಕಂಡುಬರುತ್ತವೆ.[೨೧] ಇವರು ಶೈವ, ವೈಷ್ಣವ, ಜೈನ, ಎಲ್ಲ ಧರ್ಮಗಳಿಗೂ ಪ್ರೋತ್ಸಾಹ ನೀಡಿದುದರಿಂದ ದೇವಾಲಯಗಳ ನಿರ್ಮಾಣ ಮತ್ತು ಜೀರ್ಣೋದ್ಧಾರ ನಡೆದವು.

ಈ ಪರಿಸರದಲ್ಲಿ ಬರುವ ಬಾಗುಳಿಯ ಶಾಸನದಲ್ಲಿ ಶ್ರೀ ವೀರಬಲ್ಲಾಳ ದೇವರು ಬಾಗ್ಗುಳಿ ನೆಲೆವೀಡಿನೊಳು ಅಳುತ್ತಿದ್ದದು ಉಲ್ಲೇಖವಾಗಿದೆ. ಇಲ್ಲಿಯ ದೇವರಿಗೆ ಅಂಗ ರಂಗಭೋಗ ಮತ್ತು ಜೀರ್ಣೋದ್ಧಾರಕ್ಕೆ ಅಲ್ಲಿಯ ಬ್ರಾಹ್ಮಣರ ಭೋಜನಕ್ಕೆ ನಂದಿಬೇಲೂರನ್ನು ದಾನವಾಗಿ ಬಿಟ್ಟ ಉಲ್ಲೇಖವಿದೆ.[೨೨]

ನೀಲಗುಂದ ಭೀಮೇಶ್ವರ ದೇವಾಲಯ ಅವರಣದಲ್ಲಿ ಇವರ ಆಳ್ವಿಕೆಯ ಎರಡು ಶಾಸನಗಳು ದೊರೆತಿವೆ. ಅವುಗಳಲ್ಲಿ ವೀರಬಲ್ಲಾಳನು ದೇವಗಿರಿ ಯಾದವ ಸೈನ್ಯವನ್ನು ಸೊರಟೂರಿನಿಂದ ಕೃಷ್ಣವೇಣಿ ನದಿಯ ದಡದವರೆಗೂ ಏಕಾಂಗಿಯಾಗಿ ತಳ್ಳಿದನೆಂದು ವರ್ಣಿಸಿದೆ. ವಿಜಯ ಸಾಧಿಸಿದ ನೆನಪಿಗಾಗಿ ಭೀಮೇಶ್ವರನ ಸೇವೆಗಾಗಿ ಮಾಚಿಹಳ್ಳಿಯನ್ನು ದಾನ ನೀಡಿದ್ದುದರ ಉಲ್ಲೇಖವಿದೆ.[೨೩]

ಇವರ ಆಡಳಿತ ಅವಧಿಯ ಬಗ್ಗೆ ಕೊಟ್ಟೂರು, ಅಲಗಿಲವಾಡ ಮುಂತಾದ ಸ್ಥಳಗಳಲ್ಲಿ ಶಾಸನ ದೊರೆತಿದೆ. ಉಚ್ಚಂಗಿದುರ್ಗದ ಶಾಸನದಲ್ಲಿ ಪಾಂಡ್ಯರನ್ನು ಸೋಲಿಸಿ ಸಾಮಂತ ಅರಸರನ್ನಾಗಿ ನೇಮಿಸಿದನೆಂದು ಶಾಸನ ಉಲ್ಲೇಖಿಸಿದೆ. ಹೀಗಾಗಿ ನೀಲಗುಂದ ಪರಿಸರವು ಇವರ ಅಧೀನದಲ್ಲಿತ್ತೆಂದು ಹೇಳಬಹುದು.

## ವಿಜಯನಗರದ ಅರಸರು

ಹೊಯ್ಸಳರ ಉತ್ತರಾಧಿಕಾರಿಗಳಾಗಿ ಆಳ್ವಿಕೆಗೆ ಬಂದ ಮನೆತನ ವಿಜಯನಗರ ಅರಸರದು. ಇವರು ಕ್ರಿ.ಶ.೧೩೩೬ರಂದು ಅಸ್ತಿತ್ವಕ್ಕೆ ಬಂದರು. ವಿಜಯನಗರ ಸಾಮ್ರಾಜ್ಯವನ್ನು ೧೫೬೫ರವರೆಗೆ ಸಂಗಮ, ಸಾಳ್ವ, ತುಳುವ ಮತ್ತು ಅರವೀಡು ಈ ನಾಲ್ಕು ಮನೆತನಗಳು ಹಂಪಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದವು. ಇವರ ಕಾಲದಲ್ಲಿ ಶೈವ, ವೈಷ್ಣವ ಮತ್ತು ಜೈನ ಪಂಥಗಳಿಗೆ ಸಂಬಂಧಿಸಿದಂತೆ ದೇವಾಲಯಗಳು ನಿರ್ಮಾಣಗೊಂಡವು.[೨೪]

ಇವರ ಆಳ್ವಿಕೆಯಲ್ಲಿ ಕೆಲವು ದೇವಾಲಯ ಜೀರ್ಣೋದ್ಧಾರಗೊಂಡವು. ಅದರಲ್ಲಿ ಹಂಪಿ, ತಿಮ್ಮಲಾಪುರ, ಆನೆಗುಂದಿ, ಕುರುಗೋಡು, ಶ್ರೀರಂಗಪಟ್ಟಣ, ಬೇಲೂರು, ಗದಗ, ಶ್ರವಣಬೆಳಗೊಳ, ನಂಜನಗೂಡು[೨೫] ಹಾಗೂ ನೀಲಗುಂದ ಪರಿಸರದ ಸುತ್ತಮುತ್ತಲೂ ಇವರ ಕಾಲದಲ್ಲಿ ದೇವಾಲಯಗಳು ನಿರ್ಮಾಣಗೊಂಡಿರುವುದು ತಿಳಿದುಬರುತ್ತದೆ. ಹರಪನಹಳ್ಳಿ ಮತ್ತು ಉಚ್ಚಂಗಿ ದುರ್ಗದಲ್ಲಿ ಜೈನ ಬಸದಿಗಳನ್ನು ಕಟ್ಟಿಸಿದ್ದು ಮುತ್ತಿಗಿ, ಮೈದೂರು, ಕಸವನಹಳ್ಳಿ, ಕೆರೆಗುಡಿಹಳ್ಳಿ, ಅರಸೀಕೆರೆ, ಚಟ್ನಹಳ್ಳಿ, ಮೈಲಾರ ಮತ್ತು ಹಲುವಾಗಲು ಮೊದಲಾದ ಸ್ಥಳದಲ್ಲಿ ಇವರ ಕಾಲದ ಶಾಸನಗಳು ಕಂಡುಬಂದಿರುವುದರಿಂದ ನೀಲಗುಂದ ಪರಿಸರ ಅವರ ಅಧೀನದಲ್ಲಿತ್ತೆಂದು ದೃಢಪಡಿಸಲಾಗಿದೆ.

## ಹರಪನಹಳ್ಳಿ ಪಾಳೇಗಾರರು

ವಿಜಯನಗರ ಅವನತಿ ಹೊಂದಿದ ನಂತರ ವಿಜಯನಗರ ಸಾಮ್ರಾಜ್ಯದ ದಳವಾಯಿಗಳು ಸರದಾರರು, ಸೇವೆಯಲ್ಲಿದ್ದ ಅನೇಕ ಪಾಳೇಗಾರರು ಸ್ವತಂತ್ರರಾಗಿ ಪಾಳೇಪಟ್ಟುಗಳನ್ನು ಸ್ಥಾಪಿಸಿದರು. ಇವರು ಹರಪನಹಳ್ಳಿ ಪಾಳೇಗಾರರು, ಗುಡೇಕೋಟೆ ಪಾಳೇಗಾರರು, ಜರಿಮಲೆ ಪಾಳೇಗಾರರು, ಉಜ್ಜೈನಿ ಪಾಳೇಗಾರರು, ದರೋಜಿ ಪಾಳೇಗಾರರು, ಬಾಣರಾಪಿ ಪಾಳೇಗಾರರು, ಕುಡುತಿನಿ ಪಾಳೆಗಾರರು, ವೀರನದುರ್ಗ ಪಾಳೆಯಗಾರರು. ಇವರಲ್ಲಿ ಪ್ರಮುಖರಾದ ಹರಪನಹಳ್ಳಿ ಪಾಳೆಯಗಾರರು.

ಇವರಲ್ಲಿ ಮೊದಲು ದಾದಾಯ್ಯ ನಾಯಕನು ಬಾಗಳಿಯನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದನು. ದಾದಾಯ್ಯನಾಯಕನು ಬೇಟೆಯಾಡುವುದರಲ್ಲಿ ನಿಸ್ಸೀಮನಾಗಿದ್ದನು.[೨೧] ನೀಗ್ಗ್ರಂದದ ಅಡವಿಗೆ ಬೇಟೆಗೆ ಹೋಗುವಾಗ ಮೊಲವು ಬೇಟೆ ನಾಯಿಗಳನ್ನು ತಿರುಗಿ ಹಿಂಬಾಲಿಸುವುದರ ಪ್ರಸಂಗ ನೋಡಿ ಗಂಡು ಮೆಟ್ಟಿನ ಭೂಮಿ ಎಂದು ತಿಳಿದು ಬಾಗಳಿಯ ಆಡಳಿತ ಕೇಂದ್ರವನ್ನು ಹರಪನಹಳ್ಳಿಗೆ ಬದಲಾಯಿಸಿದನು. ಕೋಟೆಯ ಸುತ್ತಲೂ ತಗ್ಗಿನ(ಕಂದಕದ) ಆಳವನ್ನು ಹೆಚ್ಚಿಸಿದನು. ತನ್ನ ಸೈನ್ಯವನ್ನು ಬಲಪಡಿಸಿಕೊಳ್ಳುತ್ತಾ ಆಡಳಿತದಲ್ಲಿ ಸುಧಾರಣೆಯನ್ನು ತಂದುಕೊಂಡು ಪ್ರಬಲ ಪಾಳೇಗಾರನೆನಿಸಿದ. ಇವನು ಸಾಮ್ರಾಜ್ಯವನ್ನು ಮದಲಗಟ್ಟ, ಕೋಗಳಿ, ಸಂಡೂರು, ನೀಲಗುಂದದವರೆಗೂ ವಿಸ್ತರಿಸಿ ತನ್ನ ಆಡಳಿತ ವ್ಯಾಪ್ತಿಗೆ ಸುಮಾರು ೪೦೦ ಹಳ್ಳಿಗಳನ್ನು ಸೇರಿಸಿಕೊಂಡು ಆಳ್ವಿಕೆ ನಡೆಸಿದನು.[೨೨]

ದಾದಾಯ್ಯ ನಾಯಕನ ನಂತರ ೧೪ ಪುರುಷರು ಮತ್ತು ಒಬ್ಬಳು ಸ್ತ್ರೀ ಆಡಳಿತ ನಡೆಸಿದ್ದಾರೆ.[೨೩] ಇವರ ಆಡಳಿತ ಅವಧಿಯಲ್ಲಿ ಅನೇಕ ಯುದ್ಧಗಳು ನಡೆದವು. ಚಿತ್ರದುರ್ಗದ ಅಧೀನದಲ್ಲಿರುವ ಉಚ್ಚಂಗಿ ದುರ್ಗವನ್ನು ತಮ್ಮ ವಶ ಮಾಡಿಕೊಂಡು ಸುಮಾರು ೨೫೦ ವರ್ಷಗಳ ಆಳ್ವಿಕೆ ನಡೆಸಿದ್ದಾರೆಂದು ಹೇಳಬಹುದಾಗಿದೆ.

ಪಾಳೇಗಾರರ ಆಡಳಿತ ಅವಧಿಯಲ್ಲಿ ಅನೇಕ ಗ್ರಾಮಗಳು ಅಭಿವೃದ್ಧಿಗೊಂಡವು. ಅದರಲ್ಲಿ ಪ್ರತಿಯೊಂದು ಗ್ರಾಮದ ಮುಂಭಾಗದಲ್ಲಿ ನೀರಿನ ಹೊಂಡಗಳನ್ನು ನಿರ್ಮಾಣ ಮಾಡಲಾಗಿತ್ತು. ಈಗಲೂ ಇದರ ಪ್ರಯೋಜನವನ್ನು ಜನರು ಪಡೆದುಕೊಳ್ಳುತ್ತಿದ್ದಾರೆ. ಇವರ ಆಡಳಿತದ ಅವಧಿಯಲ್ಲಿ ರೈತರಿಗೆ ಹೆಚ್ಚಿನ ಪ್ರೋತ್ಸಾಹ ನೀಡುವುದಕ್ಕಾಗಿ ಹರಪನಹಳ್ಳಿಯ ಹಿರೇಕೆರೆಯನ್ನು ನಿರ್ಮಾಣ ಮಾಡಿದರೆಂದು ಸ್ಥಳೀಯರ ಹೇಳಿಕೆಯಾಗಿದೆ.

ಇವರ ಆಳ್ವಿಕೆಯ ಅವಧಿಯಲ್ಲಿ ಕೆಲವು ಸ್ಥಳಗಳಲ್ಲಿ ದೇವಾಲಯಗಳು ನಿರ್ಮಾಣಗೊಂಡಿವೆ. ಹರಪನಹಳ್ಳಿಯಲ್ಲಿ ವೀರಭದ್ರೇಶ್ವರ ಮತ್ತು ಕೋಟೆ ಆಂಜನೇಯ ಮುಂತಾದ ದೇವಾಲಯಗಳು ನಿರ್ಮಾಣವಾಗಿರಬಹುದು. ಅಲ್ಲದೆ, ಇವರ ಕಾಲದ ಉಚ್ಚಂಗಿದುರ್ಗದ ದೇವಾಲಯದಲ್ಲಿ ಗಂಟೆಗಳ ಮೇಲಿನ ಶಾಸನ, ಬನ್ನಿಕಲ್ಲು ಶಾಸನ, ಕಲ್ಲಹಳ್ಳಿಯ ೧೭ನೇ ಶತಮಾನದ ಶಾಸನದಲ್ಲಿ ಬಸವನಾಯಕನ ಉಲ್ಲೇಖ[೨೪] ಲಭ್ಯವಾಗಿದೆ.

ಹರಪನಹಳ್ಳಿ ಪಾಳೇಗಾರರ ಕೊನೆಯ ಅರಸಿಯಾದ ನೀಲಮ್ಮಾಜಿಯು ನಿಗ್ಗ್ರಂದದಲ್ಲಿ ಚಿಕ್ಕ ಪಾಳೇಯಪಟ್ಟು ಕಟ್ಟಿಕೊಂಡು ಸುಮಾರು ವರ್ಷಗಳ ಕಾಲ ಆಡಳಿತ ನಡೆಸಿದಳು. ಹಾಗಾಗಿ ಈ ಗ್ರಾಮಕ್ಕೆ ಕಾಲಕ್ರಮೇಣ ನೀಗ್ಗ್ರಂದ ಬದಲಾಗಿ ನೀಲಾವತಿ ಪಟ್ಟಣವೆಂದೂ ಕರೆಯುತ್ತಾ ಮುಂದೆ ನೀಲಗುಂದವಾಗಿ ಮಾರ್ಪಾಡಾಗಿದೆ ಎಂಬುದು ಸ್ಥಳೀಯರ ನಂಬಿಕೆ.

## ನೀಲಗುಂದದ ದಳವಾಯಿ ಕೆಂಚಪ್ಪ

ಹರಪನಹಳ್ಳಿ ಪಾಳೇಗಾರರ ಕಾಲದಲ್ಲಿ ದಳವಾಯಿಯಾದ ಕೆಂಚನಾಯಕನ ಬಗ್ಗೆ ಒಂದು ಕಥೆಯನ್ನೇ ಹೇಳುತ್ತಾರೆ. ಕ್ರಿ.ಶ.೧೭೪೯ರಲ್ಲಿ ಒಂದನೇ ಸೋಮಶೇಖರ ನಾಯಕ ಒಮ್ಮೆ ಬೇಟೆಯಾಡಲು ನೀಲಗುಂದ ಅಡವಿಗೆ ಬೇಡರ ಪಡೆಯೊಂದಿಗೆ ಹೋದಾಗ ನೀಲಗುಂದ ವಾಲ್ಮೀಕಿ ಕುಲಕ್ಕೆ ಸೇರಿದ ಕೆಂಚಪ್ಪ ಎನ್ನುವ ಬಡ ಹುಡುಗನ ಧೈರ್ಯ ಹಾಗೂ ಬಲಶಾಲಿತನವನ್ನು ಕಂಡು ತನ್ನ ಸೇನೆಗೆ ಆತನನ್ನು ಸೇರಿಸಿಕೊಳ್ಳುತ್ತಾನೆ. ಕೆಂಚ ಮುಂದೆ ದಳವಾಯಿಯಾಗುತ್ತಾನೆ. ಒಮ್ಮೆ ಹಾಲುಘಟ್ಟದ ಯುದ್ಧದಲ್ಲಿ ನಾಯಕನಿಗೆ ಸೋಲುಂಟಾದಾಗ ಈ ಕೆಂಚಪ್ಪನೇ ಹರಿಹರದ ಮಾರ್ಗದಲ್ಲಿ ಸೇನೆ ತಂದು ಯುದ್ಧ ಮಾಡಿ ಹಾಲುಘಟ್ಟ ಕೋಟೆಯನ್ನು ವಶಮಾಡಿಕೊಂಡು ಹನುಮಧ್ವಜವನ್ನು ಹಾರಿಸಿ ಕೋಟೆಯ ಮುಂಭಾಗದಲ್ಲಿ ಇಳಿಯುತ್ತಿದ್ದಾಗ, ಈಟಿಯೊಂದು ಇವನ ಎದೆಯಲ್ಲಿ ನಾಟಿಬಿಟ್ಟಿತಂತೆ. ಆದರೆ ಹಾಲುಘಟ್ಟ ಕೋಟೆಯನ್ನು ಗೆದ್ದ ಸಂತೋಷದ ವಿಚಾರವನ್ನು ತನ್ನ ನೆಚ್ಚಿನ ನಾಯಕನಿಗೆ ತಿಳಿಸಿಯೇ ತೀರಬೇಕೆಂದು ಕುದುರಿಯೇರಿ, ಜೀವ ಹಿಡಿದುಕೊಂಡು ಹರಪನಹಳ್ಳಿ ಗಡಿಮುಟ್ಟಿದಾಗ ಅವನ ಪ್ರಾಣಪಕ್ಷಿ ಹಾರಿಹೋಯಿತೆಂದು ಸೋಮಶೇಖರ ನಾಯಕನು ತನ್ನ ದಳವಾಯಿಯ ಮರಣದಿಂದ ಬಹಳ ದುಃಖಿತನಾಗಿ ಅವನ ಹೆಸರಿಗೆ ಹರಪನಹಳ್ಳಿ ಹಿರೇಕೆರೆಯ ಹಿಂಭಾಗದಲ್ಲಿ ಅವನ ಹೆಸರಿನಲ್ಲಿ ವೀರಗಲ್ಲನ್ನು ನಿಲ್ಲಿಸಿರುವುದು ಈಗಲೂ ಕಾಣಬಹುದಾಗಿದೆ.[೬೦]

## ಮಹಾಬಲಿ ವಂಶೀಯರು

ನೀಲಗುಂದ ಮತ್ತು ಬಾಗಳಿ ಶಾಸನಗಳಲ್ಲಿ ಮಹಾಬಲಿ ವಂಶದ ರಾಜರ ಹೆಸರು ಬರುತ್ತದೆ. ಆದರೆ ಕರ್ನಾಟಕದ ಪೂರ್ವಭಾಗದಲ್ಲಿದ್ದ ಮಹಾಬಲಿ ವಂಶದ ಅರಸರಿಗೂ ಬಾಣ ಅರಸರಿಗೂ ಇದ್ದ ಸಂಬಂಧ ತಿಳಿಯುವುದಿಲ್ಲ. ಈ ಶಾಸನವು[೬೧] (ಕಾಲದ ಉಲ್ಲೇಖವಿಲ್ಲ) ತ್ರುಟಿತವಾಗಿದೆ. ಈ ಶಾಸನದಲ್ಲಿ ಇವರ ಉಲ್ಲೇಖ ಹೀಗೆ ಕಂಡುಬರುತ್ತದೆ.

ಶ್ರೀ ಮಹಾಬಲಿ
ವಂಶ ಆದಿಪೆಂಪ
ದೇರಿ ನೀರ್ಗುನ್ದ ಗ್ರಾಮೋ
ಉಪವಸನ ಪುತ್ರಂ
ದಸವಮದೆ.....
....

ಇದು ಸರಿಯಾದ ಅರ್ಥವನ್ನು ತಿಳಿಸುವುದಿಲ್ಲ. ಆದರೆ ಎರಡರಲ್ಲೂ ಆದಿಪೆಂಪ ಎಂದಿರುವುದು ಈ ವಂಶದ ನಾಯಕನಿರಬಹುದು. ಈ ಶಾಸನದಲ್ಲಿ ಮಹಾಬಲಿ ವಂಶದ ದಶವರ್ಮನ ಉಲ್ಲೇಖ ಬಂದಿದೆ. ಕಲ್ಲೇಶ್ವರ ದೇವಾಲಯದ ನವರಂಗದ ಹಿಂಬದಿಯ ಗೋಡೆಯ ಶಾಸನವೂ ಕೂಡಾ ಅದೇ

ಉಲ್ಲೇಖವನ್ನು ತಿಳಿಸುತ್ತದೆ. ಮಹಾ ಸಾಮಂತ ದ್ವಿಪತಿ, ಮಹಾಬಲಿವಂಶದ 'ಆದಿಪೆಮಾಸೊಂ ನೀರ್ಗ್ಗುಂದ ಗ್ರಾಮ ತೋದಾಲ ಗಂಗನ ವತ್ತ್ರಂ ಲಯನಾ ಮನ್ನಕೇ ಶ್ರೀ ಮೊತೊಚವನ ಪುತ್ರ ದಸವರ್ಮ' ಎಂದು ಉಲ್ಲೇಖಿಸಿದೆ. ಇದರ ಕಾಲ ಹನ್ನೆರಡನೆಯ ಶತಮಾನ ಎಂದು ವ್ಯಕ್ತವಾಗಿದೆ. ಇದು ಕಾಲದ ಉಲ್ಲೇಖವನ್ನು ನೀಡುವುದಿಲ್ಲ.

ಆಯು ಶ್ರೀ ಮಹಾಬಲಿವಂಸ ಆದಿಪೆವೊ

ನೀರ್ಗ್ಗುದ ಗ್ರಾಮಂ......[೨]

ಎಂದು ಉಲ್ಲೇಖವಾಗಿದೆ. ಆದರೆ ಎಲ್ಲಾ ಶಾಸನಗಳಲ್ಲಿ ನೀರ್ಗ್ಗುಂದ ಎಂದು ಬಂದಿರುವುದರಿಂದ ಆತನು (ದಶವರ್ಮ) ನೀಲಗುಂದವನ್ನು ಕೇಂದ್ರವಾಗಿ ಮಾಡಿಕೊಂಡು ಆಳಿರಬಹುದಾಗಿದೆ. ಹೀಗೆ ಮಹಾಬಲಿ ವಂಶದವರು ಕೋಲಾರ, ಬೆಂಗಳೂರು ಜಿಲ್ಲೆಗಳಲ್ಲಿ ಮಾತ್ರ ಕಾಣಿಸಿಕೊಳ್ಳದೇ, ಬಳ್ಳಾರಿ ಜಿಲ್ಲೆಯ ಹರಪನ ಹಳ್ಳಿ ಸುತ್ತಲಿನ ನೀಲಗುಂದ ಮತ್ತು ಬಾಗಳಿ ಪ್ರದೇಶಗಳಲ್ಲೂ ಇದ್ದರೆಂದು ಊಹಿಸಲಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಪರಿಸರ ಕ್ರಿ.ಪೂ.೩ನೇ ಶತಮಾನದಿಂದ ೧೭ನೇ ಶತಮಾನದವರೆಗೂ ತನ್ನದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡಿರುವುದರಿಂದ ಈ ಪ್ರದೇಶವನ್ನು ಐತಿಹಾಸಿಕ ಸ್ಥಳವೆಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧. ಸಂಕ್ಷಿಪ್ತ ಕನ್ನಡ ನಿಘಂಟು, ೨೦೦೧, ಪು.೬೭೯

೨. ಅದೇ, ಪು.೨೭೯

೩. ದೇವರಕೊಂಡಾರೆಡ್ಡಿ, ೧೯೯೮, ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ, ಪು.೫೩೧

೪. ಅದೇ, ಪು.೫೩೦

೫. ಅದೇ, ಪು.೫೩೧

೬. ಸಂಕ್ಷಿಪ್ತ ಕನ್ನಡ ನಿಘಂಟು, ಪು.೨೭೮

೭. ಅದೇ, ಪು.೧೬೭

೮. ಅದೇ, ಪು.೧೩೭೩

೯. ಅದೇ, ಪು.೧೩೭೩

೧೦. ಅದೇ, ಪು.೮೭೨

೧೧. ಅದೇ, ಪು.೧೩೦೪

೧೨. ಅದೇ, ಪು.೭೪೯

೧೩. ಶಿವತಾರಕ್, ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪು.೧

೧೪. ಅದೇ, ಪು.೧

೧೫. ಅದೇ, ಪು.೨

೧೬. ಅದೇ, ಪು.೩೩೧

೧೭. ಅದೇ, ಪು.೩೩೦

೧೮. ಅದೇ, ಪು.೧೩೧

೧೯. ಅದೇ, ಪು.೧೭

೨೦. ಅದೇ, ಪು.೩೩೧

೨೧. ಅದೇ, ಪು.೧೫

೨೨. ಅದೇ, ಪು.೩೩೧

೨೩. ಅದೇ, ಪು.೨೧

೨೪. ಅದೇ, ಪು.೩೩೧

೨೫. ನಾಗಯ್ಯ ಜೆ.ಎಂ., ೨೦೦೨, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಪು.೨೬

೨೬. ಗಿರಿಜ ಟಿ., ೧೯೯೧, ಚಿತ್ರದುರ್ಗ ಜಿಲ್ಲಾ ದರ್ಶನ, ಪು.೨೮೭

೨೭. ತಿಪ್ಪೇಸ್ವಾಮಿ, ೨೦೦೦, ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪು.೧೮

೨೮. ಸುರೇಶ್ ಕೆ.ಎಂ., ೧೯೯೯, ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ, ಪ್ರಸ್ತಾವನೆ, ಪು.೧೭

೨೯. ಕುಂ.ಬಾ.ಸ., ೧೯೯೦, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ದರ್ಶನ, ಪು.೧

೩೦. ಸೋಮಶೇಖರ ಎಸ್.ವೈ., ೧೯೯೭, ಆಕನೂರು ಗ್ರಾಮದ ಬಳಿ ಆದಿ ಇತಿಹಾಸ ಕುರುಹುಗಳು, ಇತಿಹಾಸ ದರ್ಶನ, ಸಂಪುಟ ೧೨

೩೧. ಗಿರಿಜ ಟಿ., ಸಂಡೂರು ಪರಿಸರದ ಶಾಸನೋಕ್ತ ದೇವಾಲಯಗಳು, ಪು.೨೧

೩೨. ಕುಂ.ಬಾ.ಸ., ೧೯೯೦, ಪೂರ್ವೋಕ್ತ, ಪು.೨

೩೩. ಶಂಕರನಾರಾಯಣರಾವ್, ೧೯೮೨, ಹರಿಹರೇಶ್ವರ ದೇವಾಲಯ, ಪು.೧೯

೩೪. ಸುರೇಶ್ ಕೆ.ಎಂ., ಪೂರ್ವೋಕ್ತ, ಪ್ರಸ್ತಾವನೆ, ಪು.೧೮

೩೫. ಅದೇ, ಪು.೧೮

೩೬. ಮಂಜುನಾಥ ಪಾಟೀಲ್, ೨೦೦೩, ದಾವಣಗೆರೆ ಜಿಲ್ಲೆಯ ಶಾಸನಗಳು, ಪು.೧೫

೩೭. ನಾಗಯ್ಯ ಜೆ.ಎಂ., ೨೦೦೨, ಪೂರ್ವೋಕ್ತ, ಪು.೩೧

೩೮. ಅದೇ, ಪು.೩೨

೩೯. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪು.೧೮

೪೦. ಅದೇ, ಪು.೧೮

೪೧. ಭಾರತಿ ಅಳವಂಡಿ ಮಠ, ೨೦೦೩, ಬಾಗಳಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೨೪

೪೨. ಅದೇ, ಪು.೨೪

೪೩. ಅದೇ, ಪು.೨೪

೪೪. ಅದೇ, ಪು.೨೪

೪೫. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪು.೫೧೦

೪೬. ಭಾರತಿ ಅಳವಂಡಿ ಮಠ, ೨೦೦೩, ಪೂರ್ವೋಕ್ತ, ಪು.೨೬

೪೭. ನಾಗಯ್ಯ ಜೆ.ಎಂ., ೨೦೦೨, ಪೂರ್ವೋಕ್ತ, ಪು.೩೫

೪೮. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪು.೫೨೯

೪೯. ಅದೇ, ಪು.೫೦೮

೫೦. ಅದೇ, ಪು.೫೨೪

೫೧. ಭಾರತಿ ಅಳವಂಡಿ ಮಠ, ೨೦೦೩, ಪೂರ್ವೋಕ್ತ, ಪು.೩೪

೫೨. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪ್ರಸ್ತಾವನೆ, ಪು.೨೫

೫೩. ಭಾರತಿ ಅಳವಂಡಿ ಮಠ, ೨೦೦೩, ಪೂರ್ವೋಕ್ತ, ಪು.೩೪

೫೪. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪು.೫೧೧

೫೫. ಅದೇ, ಪು.೫೩೮

೫೬. ಭಾರತಿ ಅಳವಂಡಿ ಮಠ, ೨೦೦೩, ಪೂರ್ವೋಕ್ತ, ಪು.೩೬

೫೭. ಅದೇ, ಪು.೩೬

೫೮. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪ್ರಸ್ತಾವನೆ, ಪು.೨೯

೫೯. ನಾಗಯ್ಯ ಜೆ.ಎಂ., ೨೦೦೨, ಪೂರ್ವೋಕ್ತ, ಪು.೭೦

೬೦. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪ್ರಸ್ತಾವನೆ, ಪು.೩೦

೬೧. ಅದೇ, ಪು.೩೦

೬೨. ಸುರೇಶ್ ಕೆ.ಎಂ., ೧೯೯೯, ಪೂರ್ವೋಕ್ತ, ಪು.೩೧

೬೩. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪ್ರಸ್ತಾವನೆ, ಪು.೧೪

೬೪. ಅದೇ, ಪು.೫೩೧

೬೫. ಅದೇ, ಪು.೫೩೩

೬೬. ನಾಗಯ್ಯ ಜೆ.ಎಂ., ೨೦೦೨, ಪೂರ್ವೋಕ್ತ, ಪು.೫೧

೧೭. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪ್ರಸ್ತಾವನೆ, ಪು.೩೨

೧೮. ಅದೇ, ಪು.೫೨೦

೧೯. ಅದೇ, ಪ್ರಸ್ತಾವನೆ, ಪು.೩೨

೨೦. ಅದೇ, ಪ್ರಸ್ತಾವನೆ, ಪು.೩೧

೨೧. ಸುರೇಶ ಕೆ.ಎಂ., ೧೯೯೯, ಪೂರ್ವೋಕ್ತ, ಪ್ರಸ್ತಾವನೆ, ಪು.೩೧

೨೨. ನಾಗಯ್ಯ ಜೆ.ಎಂ., ೨೦೦೨, ಪೂರ್ವೋಕ್ತ, ಪು.೪೯

೨೩ ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪು.೫೩೨-೫೩೩

೨೪. ಸುರೇಶ್ ಕೆ.ಎಂ., ೧೯೯೯, ಪೂರ್ವೋಕ್ತ, ಪ್ರಸ್ತಾವನೆ, ಪು.೩೪

೨೫. ಅದೇ, ಪು.೩೪

೨೬. ಭಾರತಿ ಅಳವಂಡಿ ಮಠ, ೨೦೦೪, ಹರಹನಹಳ್ಳಿ ಮೊದಲ ಪಾಳೆಯಗಾರ ಬಾಗಳಿ ದಾದನಾಯಕ, ಇತಿಹಾಸ ದರ್ಶನ, ಸಂಪು.೧೭, ಪು.೨೪೮-೪೯

೨೭. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಪು.೨೧

೨೮. ಕುಂ.ಬಾ.ಸ, ೧೯೯೦, ಪೂರ್ವೋಕ್ತ, ಪು.೩೮

೨೯. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪ್ರಸ್ತಾವನೆ, ಪು.೩೫

೩೦. ಕುಂ.ಬಾ.ಸ, ೧೯೯೦, ಪೂರ್ವೋಕ್ತ, ಪು.೫೨-೫೩

೩೧. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪು.೫೩೬

೩೧. ಅದೇ, ಪು.೫೩೬

# ಅಧ್ಯಾಯ ೩

# ಶಾಸನಗಳು

೩.೧. ದಾನ ಶಾಸನಗಳು

೩.೨. ಸ್ಮಾರಕ ಶಾಸನಗಳು

೩.೩. ಶಾಸನ ಸಾಹಿತ್ಯ

೩.೪. ಅಗ್ರಹಾರ

೩.೫. ಮಹಾಜನರು

೩

# ಶಾಸನಗಳು

ಭಾರತದ ಇತಿಹಾಸ ರಚನೆಗೆ ಶಾಸನಗಳು ಪ್ರಮುಖ ಆಧಾರಗಳಾಗಿವೆ. ಶಾಸನಗಳು ದೊರಕುವ ಸಂಖ್ಯೆಯನ್ನು ಗಮನಿಸಿದಾಗ ಮೊದಲ ಸ್ಥಾನ ತಮಿಳುನಾಡು ಎರಡನೇ ಸ್ಥಾನ ಕರ್ನಾಟಕ ಪಡೆದುಕೊಂಡಿದೆ. ಶಾಸನಗಳಲ್ಲಿ ದಾನ ಶಾಸನಗಳ ಸಂಖ್ಯೆಯೇ ಅತ್ಯಧಿಕ. ದಾನ, ಧರ್ಮಗಳೇ ಶಾಸನಗಳಿಗೆ ಪ್ರೇರಕ ಶಕ್ತಿ. ದಾನ ಶಾಸನಗಳಲ್ಲಿ ಅತಿ ಮುಖ್ಯವಾದವು ದೇವಾಲಯಗಳಿಗೆ ನೀಡಿದ ದಾನ-ದತ್ತಿಗಳು. ದೇವಾಲಯಗಳ ನಿರ್ಮಾಣ, ದೇವಾಲಯಗಳ ಜೀರ್ಣೋದ್ಧಾರ ಮುಂತಾದ ಧರ್ಮಕಾರ್ಯಗಳು ನಡೆದಾಗ ಅರಸರು, ಅಧಿಕಾರಿಗಳು ಮತ್ತು ಸಾಮಂತ ಅರಸರು ದೇವಾಲಯಗಳಿಗೆ, (ವ್ಯಕ್ತಿಗಳಿಗೆ) ಮಹಾಜನರಿಗೆ, ವೀರರಿಗೆ ದಾನ ಕೊಟ್ಟಾಗ ಶಾಸನಗಳನ್ನು ಹಾಕಿಸುತ್ತಿದ್ದರು.

ದಾನ ಶಾಸನಗಳು ಕರ್ನಾಟಕ ಸಂಸ್ಕೃತಿಯ ಪ್ರಧಾನವಾದ ಅಂಶಗಳನ್ನು ಎತ್ತಿ ತೋರಿಸುತ್ತವೆ. ಜೀವನದ ಮೌಲ್ಯಗಳಲ್ಲಿ ಧರ್ಮಕ್ಕೆ ಪ್ರಥಮ ಸ್ಥಾನವನ್ನಿತ್ತದ್ದಲ್ಲದೆ ಧಾರ್ಮಿಕ ಸಾಂಸ್ಕೃತಿಕ ಸ್ವರೂಪವು ಈ ಶಾಸನಗಳಲ್ಲಿ ಬಿಂಬಿತವಾಗಿವೆ. ಶಾಸನಗಳ ಉಗಮಕ್ಕೆ ಇಂತಹ ಮನೋಧರ್ಮವೇ ಪ್ರೇರಣೆಯಾಗಿರ ಬಹುದು. ದೇವಾಲಯಗಳನ್ನು ಕಟ್ಟಿಸುವುದರ ಜೊತೆಗೆ ಅವುಗಳ ವ್ಯವಸ್ಥೆಗಾಗಿ ಧರ್ಮಕಾರ್ಯಗಳಿಗಾಗಿ ದಾನ ದತ್ತಿಗಳನ್ನು ಕೊಡುತ್ತಿದ್ದರು. ಅದರ ಫಲವಾಗಿ ಪ್ರತಿ ಊರಿನಲ್ಲಿಯೂ ದೇವಾಲಯಗಳು ತಲೆ ಎತ್ತಿದ್ದವು. ದಾನ ಧರ್ಮಗಳು ಜೀವನದ ತಳಹದಿಯಾದವು. ಇದನ್ನು ದಾನ ಶಾಸನಗಳಲ್ಲಿ ಸ್ಪಷ್ಟವಾಗಿ ಕಂಡುಕೊಳ್ಳುತ್ತೇವೆ.[೧]

೧೦ನೇ ಶತಮಾನದ ಈ ದೊರೆತ ದಾನ ಶಾಸನಗಳ ರಚನಾ ಪದ್ಧತಿಯು ಒಂದು ಅಚ್ಚುಕಟ್ಟಾದ ಕ್ರಮವನ್ನು ಹೊಂದಿರುವುದು. ಅತ್ಯಂತ ಪ್ರಾಚೀನ ಶಾಸನಗಳ ಶಿಲಾ ಫಲಕಗಳ ಮೇಲೆ ನಿರ್ದಿಷ್ಟವಾದ ಯಾವ ಶಿಲ್ಪವೂ ಕಂಡುಬರುವುದಿಲ್ಲ. ಅಂದರೆ ಅನಂತರದ ಲಿಪಿಗಳನ್ನು ಕಲ್ಲುಗಳ ಮೇಲೆ ಬರೆದು ಶಿವ, ನಂದಿ, ವಿಷ್ಣು, ಗರುಡ, ಮೊದಲಾದ ಶಿಲ್ಪಗಳನ್ನು ಕೆತ್ತಿರುವುದು ಕಂಡುಬರುತ್ತವೆ. ಶೈವ, ವೈಷ್ಣವ ಧರ್ಮಗಳ ಪ್ರಭಾವ ಪ್ರಬಲವಾಗಿ ಶಾಸನಗಳ ಮೇಲೂ ಮೂಡಿದಂತೆ ತೋರುತ್ತದೆ. ಕಲ್ಲಿನ ಮೇಲಿರುವ ಶಿಲ್ಪಗಳನ್ನು ನೋಡಿದೊಡನೆ ಇದು ಶೈವ ಶಾಸನವೊ ವೈಷ್ಣವ ಶಾಸನವೊ ಎಂಬುವುದನ್ನು ತಿಳಿಯಬಹುದು. ಅನಂತರ ಪ್ರಾರಂಭದ ಶ್ಲೋಕವನ್ನು ಓದುತ್ತಿದ್ದಂತೆಯೇ ಆ ಅಂಶ ಸ್ಪಷ್ಟವಾಗುತ್ತದೆ. ಶಿವನನ್ನೋ ವಿಷ್ಣುವನ್ನೋ ಕುರಿತು ಸ್ತುತಿಸಿರುವ ಸಂಸ್ಕೃತ ಶ್ಲೋಕದಿಂದ ಶಾಸನ ಪ್ರಾರಂಭವಾಗುವುದನ್ನು ಕಾಣುತ್ತೇವೆ.[೨]

## ೩.೧. ದಾನಶಾಸನಗಳು

ಶಾಸನಗಳನ್ನು ಅಧ್ಯಯನ ಮಾಡಿದಾಗ ವಿವಿಧ ರೀತಿಯ ವಿಷಯಗಳು ಕಾಲದೃಷ್ಟಿ, ಪ್ರಾದೇಶಿಕ ದೃಷ್ಟಿ, ವಸ್ತು ದೃಷ್ಟಿ, ಧರ್ಮದೃಷ್ಟಿ, ವಿಷಯ ದೃಷ್ಟಿಯಲ್ಲಿ ವಿಭಾಗ ಹೊಂದಿರುವುದನ್ನು ನೋಡಬಹುದು. ಈ ಎಲ್ಲ ಹಿನ್ನೆಲೆಯಲ್ಲಿ ನೀಲಗುಂದ ಪರಿಸರದ ವ್ಯಾಪ್ತಿಯಲ್ಲಿ ಬರುವ ಸುಮಾರು ೨೭ ಶಾಸನಗಳನ್ನು ಅಧ್ಯಯನ ಮಾಡಲಾಗಿದೆ. ಈ ಶಾಸನಗಳು ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ ೧ರಲ್ಲಿ ಪ್ರಕಟಗೊಂಡಿವೆ.

ಶಂಕರಲಿಂಗ ದೇವಾಲಯದ ಮುಂಭಾಗದಲ್ಲಿರುವ ಶಾಸನವು ಕ್ರಿ.ಶ.೧೦೫೦ರ ಶಾಸನವು ಚಾಲುಕ್ಯರ ಅರಸನಾದ ತ್ರೈಲೋಕ್ಯ ಮಲ್ಲದೇವನ ಆಳ್ವಿಕೆಯ ಅವಧಿಯಲ್ಲಿ ಇವನ ಸಾಮಂತ ಪಲ್ಲವ ನರಸಿಂಹದೇವನು ಕೋಗಳಿ ೫೦೦, ಕದಂಬಳಿಕೆ ೧೦೦೦, ಬಲ್ಲಕಂದೆ ೩೦೦, ಸಿಂದವಾಡಿ ೧೦೦೦ವನ್ನು ಆಳುತ್ತಿದ್ದನು ಎಂದು ತಿಳಿಸುತ್ತದೆ. ಅಲ್ಲಿಯ ಅರಸರಾದ ಬೂತಬ್ಬರಸಿಯರ ಕೋರಸನು ಮತ್ತು ಊರೊಡೆಯ ಪುಟ್ಟಿಯಣ್ಣ ಮೊದಲಾದವರು ಸಿರವಡೆ ಮೂಲಸ್ಥಾನ ಶಂಕರ ದೇವರ ಸೇವೆಗೆ ತೇಜೋನಿಧಿ ಪಂಡಿತರ ಶಿಷ್ಯನಾದ ವಿದ್ಯಾನಿಧಿ ಪಂಡಿತರ ಪಾದಗಳನ್ನು ತೊಳೆಯುವುದರ ಮೂಲಕ ಕೈಗಾಣ ಅಡಕೆ ಮರಗಳು, ಆರು ನೂರು ಗಿಡ ಉಳ್ಳ ಬಳ್ಳಿ ತೋಟ, ಹೂವಿನ ತೋಟವನ್ನು ದಾನ ಬಿಟ್ಟಿರುವ ಉಲ್ಲೇಖವಾಗಿದೆ.[೬]

ನೀಲಗುಂದದ ಮುಕ್ತಿ ರಾಮೇಶ್ವರ ದೇವಾಲಯದ ಒಳಗಿನ ಕ್ರಿ.ಶ.೧೦೭೯ರ ಶಾಸನವು ಚಾಲುಕ್ಯ ರಾಜ ವಿಕ್ರಮಾದಿತ್ಯನ ಆಳ್ವಿಕೆಯ ಕಾಲದಲ್ಲಿ ತ್ರಿಭುವನಮಲ್ಲ ರಾಯಪಾಂಡ್ಯನು ನಿಷ್ಠಾವಂತ ಮಹಾ ಮಂಡಳೇಶ್ವರನಾಗಿ ನೊಳಂಬವಾಡಿ ೩೨೦೦೦, ಕಣ್ಣಿಕಲ್ಲು ೨೦೦, ವಿಭಾಗವನ್ನು ಆಳುತ್ತಿದ್ದನು. ಆ ಸಮಯದಲ್ಲಿ ನೀರ್ಗುಂದ ಮಹಾಜನರು ಸ್ವಯಂಭೂ ಈಶ್ವರ ದೇವರಿಗೆ ಅಂಗಭೋಗ ಉಪಾಹಾರಾದಿಗಳಿಗೆಂದು ದಾನ ನೀಡಿದ ಉಲ್ಲೇಖವಿದೆ. ಅಲ್ಲದೆ ವ್ಯಾಪಾರಕ್ಕೆಂದು ಬಂದ ೫೦೦ ಜನ ಬಣಜಿಗರು ಅಡಕೆಯ ಒಂದು ಎಲೆಯ ಹೇರಿಗೆ ಕಾಣಿಕೆಯಂತೆ ಸುಂಕದಾನ ನೀಡಿರುವುದು ಕಂಡುಬರುತ್ತದೆ.

ಅದೇ ದೇವರಿಗೆ ಕ್ರಿ.ಶ.೧೧೩೬ರಲ್ಲಿ ತೋಟಿಗರು, ಕೊಸೆಕಾರರು, ತೆಲ್ಲಿಗರು ಮತ್ತು ಇತರ ಮಹಾನ್ ವ್ಯಕ್ತಿಗಳು, ಮುಕ್ತರಾಮೇಶ್ವರ ದೇವರಿಗೆ ಪಾಗ, ವಣಿಗ, ಪಾಗ ಗಾಣಕ್ಕೆ ಇಂತಿಷ್ಟು ಎಣ್ಣೆಯಂತೆ ದಾನ ನೀಡಿದ್ದಾರೆ.

ಅದೇ ದೇವರಿಗೆ ಕ್ರಿ.ಶ.೧೧೭೪ರಲ್ಲಿ ನೀರ್ಗುಂದ ಮಹಾಜನರು ಮತ್ತಿತರರು ಈ ರಾಮೇಶ್ವರ ದೇವರಿಗೆ ಭೂದಾನ ನೀಡಿರುವ ಉಲ್ಲೇಖ ಕಂಡುಬಂದಿದೆ.[೪]

ನೀಲಗುಂದ ಭೀಮೇಶ್ವರ ದೇವಾಲಯದ ಸಭಾಮಂಟಪದಲ್ಲಿ ನಿಲ್ಲಿಸಿದ ಕ್ರಿ.ಶ.೧೧೧೦ರ ಶಾಸನವು ಚಾಲುಕ್ಯರಾಜ ತ್ರಿಭುವನ ಮಲ್ಲದೇವನು ಕಲ್ಯಾಣದಲ್ಲಿ ಆಳ್ವಿಕೆ ನಡೆಸುವ ಸಮಯದಲ್ಲಿ ಈ ಪ್ರದೇಶದ ದಂಡನಾಯಕರಾದ ಅನಂತಪಾಲಯ್ಯ ಮತ್ತು ಮುದ್ದರು ಕಿಬ್ಬ್ರಟ್ಟೆಯ ಸುಂಕವನ್ನು ತೆರಿಗೆಯ

ರೂಪದಲ್ಲಿ ತೆಗೆದುಕೊಂಡು ಆಳ್ವಿಕೆ ನಡೆಸುತ್ತಿದ್ದ ಅವಧಿಯಲ್ಲಿ ಕೋಗಳಿ ೩೦೦ರ ವಿಭಾಗವಾಗಿ ಬಿಕ್ಕಿಗ-೭೦ ಮೊದಲ ಶ್ರೀಮದ್ರಗ್ರಹಾರ ನೀರ್ಗುಗಂದ ಭೀಮೇಶ್ವರ ದೇವರ ನಂದಾದೀವಿಗೆ ನೈವೇದ್ಯಕ್ಕಾಗಿ ತಿಂಗಳಿಗೆ ಒಂದನ್ನು ಬಿಟ್ಟಿರುವುದು ಈ ಶಾಸನದಲ್ಲಿ ಉಲ್ಲೇಖವಾಗಿದೆ.[೫]

ಅದೇ ದೇವಾಲಯ ಸಭಾಮಂಟಪದಲ್ಲಿ ನಿಲ್ಲಿಸಿರುವ ಇನ್ನೊಂದು ಶಾಸನದಲ್ಲಿ ಕ್ರಿ.ಶ.೧೧೬೨ರಲ್ಲಿ ಕಲಚೂರ್ಯರ ಅರಸ ಬಿಜ್ಜಳ ದೇವನು ಕಲ್ಯಾಣಿಯಲ್ಲಿ ಆಳುತ್ತಿರುವಾಗ ಮಹಾಮಂಡಳೇಶ್ವರನಾದ ತ್ರಿಭುವನಮಲ್ಲ ವೀರಪಾಂಡ್ಯದೇವ ಕೋಗಳಿ-೩೦೦ ಮತ್ತು ಕದಂಬಳಿಗೆ ೧೦೦೦ವನ್ನು ಆಳುತ್ತಿರುವಾಗ ಈ ರಾಜನ ಆಜ್ಞೆಯಂತೆ ಕೋಗಳಿ ಮತ್ತು ಕದಂಬಳ ಸುಂಕದ ಅಧಿಕಾರಿಯಾದ ಕಲ್ಲಮಯ್ಯನು ನೀರ್ಗುಗಂದ ಭೀಮೇಶ್ವರ ದೇವರ ಅಂಗಭೋಗ, ನೈವೇದ್ಯಕ್ಕಾಗಿ ಕೆಲವು ತೆರಿಗೆಗಳನ್ನು ಮತ್ತು ಮಠಕ್ಕೆ ಜಾಗವನ್ನು ಬಿಟ್ಟಿರುವುದು ಈ ಶಾಸನದಲ್ಲಿ ಉಲ್ಲೇಖವಾಗಿದೆ.[೬]

ಅದೇ ದೇವಾಲಯದ ಇನ್ನೊಂದು ಕ್ರಿ.ಶ.೧೨೨೪ರ ಶಾಸನದಲ್ಲಿ ಹೊಯ್ಸಳರ ಅರಸನಾದ ಎರಡನೆಯ ನರಸಿಂಹನು ಆಳ್ವಿಕೆ ನಡೆಸಿದ್ದು, ಈತನ ತಂದೆ ಬಲ್ಲಾಳನು ಯಾದವರ ಸೈನ್ಯವನ್ನು ಸೊರಟೂರಿನಿಂದ ಹಿಡಿದು ಕೃಷ್ಣವೇಣಿ ನದಿಯ ದಡದವರೆಗೂ ಏಕಾಂಗಿಯಾಗಿ ಒಂದೇ ಆನೆಯ ಸಹಾಯದಿಂದ ತಳ್ಳಿದನೆಂದು ಹೊಗಳಿದೆ. ಅದರ ನೆನಪಿಗಾಗಿ ಭೀಮೇಶ್ವರ ದೇವರ ಅಂಗಭೋಗ ರಂಗಭೋಗಗಳಿಗೆ ನೈವೇದ್ಯಕ್ಕಾಗಿ ಮಾಚಿಯ ಹಳ್ಳಿ ಮತ್ತು ಪೂರ್ವಕ್ಕೆ ಬರುವ ಇನ್ನೊಂದು ಹಳ್ಳಿಯನ್ನು ದಾನ ನೀಡಿರುವುದು ಉಲ್ಲೇಖವಾಗಿದೆ.[೭]

ಅದೇ ಕಲ್ಲಿನಲ್ಲಿ ಕೆತ್ತಿರುವ ಕ್ರಿ.ಶ.೧೩೦೯ರ ಶಾಸನದಲ್ಲಿ ಕಲಚೂರ್ಯರ ಅರಸನಾದ ಬಿಜ್ಜಳ ಕಲ್ಯಾಣವನ್ನು ಆಳ್ವಿಕೆ ಮಾಡುತ್ತಿದ್ದ ಅವಧಿಯಲ್ಲಿ ಇವನ(ಸಾಮಂತ) ಮಹಾಮಂಡಳೇಶ್ವರ ಅಚ್ಚುತದೇವನು ತಲವಾಗಿಲನ್ನು ಭೀಮೇಶ್ವರ ದೇವರಿಗೆ ಹರಿಹರದ ದೇವರಿಗೆ ಕ್ರಯವಾಗಿ ಕೊಂಡು ಈ ದೇವರಿಗೆ ದಾನ ನೀಡಿದುದು ಈ ಶಾಸನದಲ್ಲಿ ಉಲ್ಲೇಖವಾಗಿದೆ.[೮]

ಭೀಮೇಶ್ವರ ದೇವಾಲಯದ ಸಭಾಮಂಟಪದಲ್ಲಿ ನಿಲ್ಲಿಸಿರುವ ಕ್ರಿ.ಶ.೧೧೦೭ರ ಶಾಸನವು ಚಾಲುಕ್ಯ ರಾಜ ಅರಸನಾದ ತ್ರಿಭುವನ ಮಲ್ಲದೇವನ ಆಳ್ವಿಕೆಯಲ್ಲಿ ಇವನ ದಂಡನಾಯಕನೊಬ್ಬನು ನೀರ್ಗುಂದ ವೀರೇಶ್ವರ ದೇವರ ಸೇವೆಗಾಗಿ ಸ್ವಲ್ಪ ಭೂಮಿಯನ್ನು ದಾನ ನೀಡಿದ ವಿವರವಿದೆ.[೯]

ಕುಂಚೂರು ಮಲ್ಲಿಕಾರ್ಜುನ ಸ್ವಾಮಿ ದೇವಾಲಯದ ಕಂಬದಲ್ಲಿರುವ ಕ್ರಿ.ಶ.೧೨೮೬ರ ಶಾಸನವು ದೇವಗಿರಿ ಯಾದವ ವಂಶದ ಅರಸನಾದ ರಾಮಚಂದ್ರನು ಆಳುತ್ತಿರುವಾಗ ಇವನ ಮಹಾಮಂಡಳೇಶ್ವರ ಲಿಂಗದೇವ ರಾಣಿಯ ಅಪ್ಪಣೆಯಂತೆ ನಾಚರಸ ಮತ್ತು ಗ್ರಾಮದ ಪ್ರಮುಖ ಮುಖಂಡನಾದ ಮಲ್ಲಣ್ಣ ಹಾಗೂ ಸಮಸ್ತ ಪ್ರಜೆಗಳ ಸಮ್ಮುಖದಲ್ಲಿ ಗ್ರಾಮದ ಹರಿಜನರ ಮುಂದೆ ಸರ್ವಾಧಿಕಾರಿ ಜಕ್ಕರಸನು

ಮತ್ತೂರು ಮಲ್ಲಿಕಾರ್ಜುನ ದೇವರ ಅಂಗಭೋಗಕ್ಕಾಗಿ ಆಚಾರ್ಯ ಕಲ್ಲೆಯ ಜೀಯ ಮತ್ತು ಹರಿಪಜೀಯರಿಗೆ ಧಾರಾಪೂರ್ವಕವಾಗಿ ದಾನ ಬಿಟ್ಟ ಉಲ್ಲೇಖವಿದೆ.[೧೦]

ಅದೇ ಕುಂಚೂರು ಗ್ರಾಮದ ಆಂಜನೇಯ ದೇವಾಲಯ ಕಂಬದಲ್ಲಿರುವ ಕ್ರಿ.ಶ.೧೨೭೬ರ ಶಾಸನದಲ್ಲಿ ಯಾದವ ಅರಸನಾದ ವೀರ ರಾಮಚಂದ್ರನ ಉಲ್ಲೇಖವಿದೆ. ಇವನ ಮಹಾಮಂಡಳೇಶ್ವರನಾದ ನಾಚರಸನು ಹಲುವಾಗಲು ಸುತ್ತ ಮುತ್ತಲಿನ ಹಳ್ಳಿಗಳನ್ನು ವಿಭಾಗ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದ ಸಮಯದಲ್ಲಿ ಕುಂಚೂರ ಊರೊಡೆಯ ಮಲ್ಲಯ ಮತ್ತು ಹಿರಿಯರು ಸೇರಿ ಕಲ್ಲೇಶ್ವರ ದೇವರಿಗೆ ಅಂಗಭೋಗ ನೈವೇದ್ಯಕ್ಕಾಗಿ ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ.[೧೧]

ಹಲುವಾಗಲು ಕಲ್ಲೇಶ್ವರ ದೇವಾಲಯದ ಕ್ರಿ.ಶ.೧೨೮೨ರ ಶಾಸನವೊಂದು ಯಾದವರ ದೊರೆಯಾದ ರಾಮಚಂದ್ರನು ತನ್ನ ಆಳ್ವಿಕೆ ಅವಧಿಯಲ್ಲಿ ಮಾಳವ, ಗುರ್ಜರ, ತೆಲುಗು ರಾಜರೊಂದಿಗೆ ಯುದ್ಧ ಮಾಡಿ ಜಯವನ್ನು ಸಾಧಿಸಿ ನಂತರ ಮುಸಲ್ಮಾನ ದೊರೆಗಳ ಉಪದ್ರವದಿಂದ ಭೂಮಿಯನ್ನು ರಕ್ಷಿಸಿದನೆಂದು ಹೊಗಳಿದೆ. ಅಲ್ಲಿಯೇ ಇರುವ ಕಲ್ಲಿನಾಥದೇವರ ಸೇವೆಗಾಗಿ ಸ್ಥಾನಿಕ ಜೋಗರಾಸಿಗೆ ಹಲುವಾಗಿಲ ಬಳಿ ಭೂಮಿಯನ್ನು ಹಲುವಾಗಿಲ ಅಧಿಕಾರಿ ವಸುದೇವನು ಹಾಗೂ ಹಳ್ಳಿಯ ಮುಖಂಡ ನಾಚರಸನೂ ಹರಿಜನರು ಹಾಗೂ ಇತರೆ ಜನಗಳು ಈ ದೇವರಿಗೆ ಭೂದಾನ ನೀಡಿದ್ದಾರೆಂಬ ಉಲ್ಲೇಖವಿದೆ.

ಕನ್ನರದೇವ ಮತ್ತು ಪಾಂಡ್ಯನಾಡಿನ ಅಧಿಕಾರಿಯಾದ ಹರಿದೇವನ ಅಣತಿಯಂತೆ ಈ ದಾನ ನೀಡಲಾಗಿದೆ. ನಾಚರಸ ಮತ್ತು ಮುಮ್ಮರಿ ದಂಡದವರೂ ಈ ದೇವರಿಗೆ ದಾನ ನೀಡಿದ ಉಲ್ಲೇಖ ಕಂಡುಬಂದಿದೆ.[೧೨]

ಅದೇ ಕಲ್ಲೇಶ್ವರದ ದೇವಾಲಯದ ಕಂಬದಲ್ಲಿನ ಕ್ರಿ.ಶ.೧೨೭೫ರ ಶಾಸನದಲ್ಲಿ ಮಸದಿದೇವನ ಅಣತಿಯಂತೆ(ಆಜ್ಞೆಯಂತೆ) ಸಾಮಂತನಾದ ಘದಿಗಪ್ಪ ಮಾಯಿದೇವನು ಇವರು ಹಲುವಾಗಲು ಗ್ರಾಮದ ಸಮಸ್ತ ಪ್ರಜೆಗಳ ಸಮ್ಮುಖದಲ್ಲಿ ಕಲ್ಲೇಶ್ವರ ದೇವರಿಗೆ ನಾಲ್ಕು ಮೂಲಿಗ ಗದ್ಯಾಣವನ್ನು ನೀಡಿದ ಉಲ್ಲೇಖ ಕಂಡುಬಂದಿದೆ.[೧೩]

## ವ್ಯಕ್ತಿಗಳಿಗೆ ದಾನ ನೀಡಿದ ಉಲ್ಲೇಖ

ಭೀಮೇಶ್ವರ ದೇವಾಲಯದ ತೊಲೆಯಲ್ಲಿರುವ ಕ್ರಿ.ಶ.೧೨೦೨ರ ಶಾಸನದಲ್ಲಿ ಹೊಯ್ಸಳ ದೊರೆಯಾದ ವೀರಬಲ್ಲಾಳನ ಆಳ್ವಿಕೆಯ ಅವಧಿಯಲ್ಲಿ ನೀಲಗುಂದ ಗ್ರಾಮದ ವ್ಯಕ್ತಿಯಾದ ಬರಿಸೆಟ್ಟಿಯು ಬಾರಿಕೆರೆಯ ತೂಬನ್ನು ಜೀರ್ಣೋದ್ಧಾರ ಮಾಡಿದ ಕಾರಣಕ್ಕಾಗಿ ನೀರ್ಗುಂದ ಮಹಾಜನಗಳು ಬರಿಸೆಟ್ಟಿಗೆ ಆ ಸಂದರ್ಭದಲ್ಲಿ ದತ್ತಿ ಬಿಟ್ಟಿರುವ ಉಲ್ಲೇಖ ಕಂಡುಬರತ್ತದೆ.[೧೪]

### ಹರಪನಹಳ್ಳಿ ತಹಶೀಲ್ದಾರ್ ಬಳಿಯಿದ್ದ ನೀಲಗುಂದ ತಾಮ್ರಶಾಸನ

ಕ್ರಿ.ಶ.೧೧೨೩ರಲ್ಲಿ ಚಾಲುಕ್ಯರಾಜ ತ್ರಿಭುವನ ಮಲ್ಲನು ಕಲ್ಯಾಣವನ್ನು ಆಳುತ್ತಿದ್ದಾಗ, ಇವನ ಮಹಾಮಂಡಳೇಶ್ವರ ಪಲಿತಪಾಂಡ್ಯನು ೧೧ನೇ ಶತಮಾನದಲ್ಲಿ ಸಾಮಂತನಾಗಿದ್ದಾಗ ನೀಲಗುಂದ ಪ್ರಮುಖ ಅಗ್ರಹಾರವಾಗಿತ್ತು. ಅಲ್ಲಿರುವ ಬ್ರಾಹ್ಮಣರಿಗೆ ನೀಗ್ರ್ಗುಂದವನ್ನು ದಾನವಾಗಿ ನೀಡುತ್ತಾನೆ. ಅಲ್ಲದೆ ಸರ್ವಾಧ್ಯಕ್ಷನಾದ ಪಲಿತಪಾಂಡ್ಯನ ಮಗನಾದ ರಾಯಪಾಂಡ್ಯನ ಕೋರಿಯಂತೆ ಕೃಷ್ಣಪಲ್ಲಿಕವನ್ನು ಬ್ರಾಹ್ಮಣರಿಗೆ ದಾನ ನೀಡಿರುವುದು ಕಂಡುಬಂದಿದೆ.[೧೫]

ಹರಪನಹಳ್ಳಿ ತಾಲ್ಲೂಕಿನ ಚಿರಸ್ತಹಳ್ಳಿ ಗ್ರಾಮದ ಶಂಕರಲಿಂಗ ದೇವಾಲಯದ ಮುಂಭಾಗದ ಶಾಸನ ಪ್ರಕಾರ ಕ್ರಿ.ಶ.೯೩೧-೩೨ರಲ್ಲಿ ರಾಷ್ಟ್ರಕೂಟರ ದೊರೆಯಾದ ಗೋವಿಂದ ಮಾನ್ಯಖೇಟವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಆಡಳಿತ ನಡೆಸುತ್ತಿರುವಾಗ ಅವನ ಸಾಮಂತನಾಗಿ ಅಯ್ಯಪ್ಪನು ಕೋಗಳಿ ಮತ್ತು ಮಾಸವಾಡಿ ೧೪೦ ಆಳುತ್ತಿದ್ದನು. ಆ ಸಮಯದಲ್ಲಿ ಎರೆಯಮ್ಮನ ಮಗನಾದ ಪಾಡಿಗನೊಳಂಬ ವೀರನು ಬೇರೆಯವರ ಆಕ್ರಮಣದಿಂದ ಹೋರಾಡಿ ಮರಣ ಹೊಂದಿದ ವ್ಯಕ್ತಿ ಕುಟುಂಬದವರಿಗೆ ಗದ್ದೆ ಮತ್ತು ಹೊಲವನ್ನು ಅಯ್ಯಪ್ಪಯ್ಯನು ದಾನ ನೀಡಿದ ಉಲ್ಲೇಖವಾಗಿದೆ.[೧೬]

### ೩.೨. ಸ್ಮಾರಕ ಶಾಸನಗಳು

ಯಾವುದಾದರೂ ಸಾಮಾಜಿಕ ಒಳತಿನ ಕಾರ್ಯಕ್ಕಾಗಿ ಅಥವಾ ಉದಾತ್ತ ತ್ಯಾಗದ ಕಾರಣಕ್ಕಾಗಿ ಜೀವವನ್ನು ಬಲಿಕೊಟ್ಟ ಜನರ ನೆನಪಿಗೆ ನಿಲ್ಲಿಸಿದ ಶಾಸನಗಳನ್ನು ಸ್ಮಾರಕ ಶಾಸನಗಳೆಂದು ಕರೆಯುತ್ತಿದ್ದರು. ಇವು ಸಾಮಾನ್ಯವಾಗಿ ಆಯಾ ಧರ್ಮ, ನಂಬಿಕೆ ಸಾಮಾಜಿಕ ಪ್ರತಿಷ್ಠೆಗಳಿಗನುಗುಣವಾಗಿ ಬೆಳೆದು ಬಂದಿವೆ. ಬೃಹದಾಕಾರದ ಪಿರಮಿಡ್ಡುಗಳಿಂದ ಹಿಡಿದು ಸಣ್ಣಪುಟ್ಟ ವೀರಗಲ್ಲುಗಳವರೆಗೂ ಇವುಗಳ ವ್ಯಾಪ್ತಿಯನ್ನು ಗುರುತಿಸಬಹುದು. ಹಾಗೆಯೇ ಪ್ರಾಗೈತಿಹಾಸಿಕ ಕಾಲದ ಕಲ್ಲಿನ ಮನೆಗಳಿಂದ ಹಿಡಿದು ಅಮೃತ ಶಿಲೆಗಳಿಂದ ನಿರ್ಮಿಸಿದ ಉನ್ನತ ನಾಗರಿಕತೆಯ ಶ್ರೇಷ್ಠ ವಸ್ತುವಿನವರೆವಿಗೂ ಇವುಗಳ ವೈವಿಧ್ಯತೆಯನ್ನು, ಗುರುತಿಸಬಹುದು. ಈ ಕಾರಣಗಳಿಂದ ಸ್ಮಾರಕಗಳು ಮಾನವನ ಜೀವದ ಹಲವು ವಿಧಾನಗಳನ್ನು ಜೀವನದ ಬಗ್ಗೆ ಅವನಿಗಿರುವ ಧೋರಣೆಯನ್ನು ಅಂದಿನ ಅವನ ನಾಗರಿಕತೆ ಮತ್ತು ಸಂಸ್ಕೃತಿಯನ್ನು ತಿಳಿಸಿಕೊಡುವ ಪುರಾವೆಗಳಾಗಿವೆ.[೧೭]

ಎಲ್ಲ ಸ್ಮಾರಕಗಳು ಮಡಿದ ವ್ಯಕ್ತಿಯ ನೆನಪಿಗಾಗಿ ಇರುವ ಸಂಕೇತಗಳು. ಮಡಿದ ವ್ಯಕ್ತಿಯ ನೆನಪನ್ನು ಘನೀಭವಿಸಿ ಅಭಿವ್ಯಕ್ತಗೊಳಿಸುವ ಸಾಧನಗಳು ಪ್ರಾರಂಭದಲ್ಲಿಯು ಸಹಾ ಸ್ಮಾರಕಗಳ ಬಗ್ಗೆ ವೇದದಲ್ಲಿ ಹೇಳಿರುವ ಪಿತೃ ಮೇಧ ಎಂಬ ವಿಧಿಯಲ್ಲಿ ಸತ್ತವನನ್ನು ಸಂಸ್ಕರಿಸಿದ ಸ್ಥಳದಲ್ಲಿ ಸ್ಮಾರಕವನ್ನು ಎತ್ತಿಸುವ ಬಗ್ಗೆ ನಮಗೆ ಮಾಹಿತಿ ದೊರೆಯುತ್ತವೆ. ಇಲ್ಲಿ ಅಂತ್ಯ ಸಂಸ್ಕಾರವಾದ ಹಲವಾರು ತಿಂಗಳು ಅಥವಾ ವರ್ಷಗಳ ನಂತರ ಈ ಸ್ಮಾರಕವನ್ನು ಮಾಡಬೇಕೆಂದು ಉಲ್ಲೇಖವಾಗಿದೆ.[೧೮]

ಈ ರೀತಿಯ ಸ್ಮಾರಕಗಳನ್ನು ಹಾಕುವ ಪದ್ಧತಿ ಮತ್ತು ಶವ ಸಂಸ್ಕಾರದ ರೀತಿಗಳು ಕಾಲಾನುಕ್ರಮದಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿಕೊಳ್ಳುತ್ತ ಪ್ರಾಗೈತಿಹಾಸಿಕ ಕಾಲದಿಂದ ಇಲ್ಲಿಯವರೆಗೆ ಆ ಜನಾಂಗದವರ ನಂಬಿಕೆ ಧರ್ಮ ಮತ್ತು ಸನ್ನಿವೇಶಗಳೊಂದಿಗೆ ಬೆಳೆದು ಬಂದವು. ಆದರೆ ಮೂಲಭೂತವಾದ ಈ ಪದ್ಧತಿಗಳು ತಮ್ಮ ಆಶಯಗಳನ್ನು ವಿಶಿಷ್ಟತೆಗಳನ್ನು ಉಳಿಸಿಕೊಂಡು ಹೆಚ್ಚಿನ ಅರ್ಥವ್ಯಾಪ್ತಿಯನ್ನು ಪಡೆದವು ಎಂಬುವುದನ್ನು ಗಮನಿಸಬೇಕಾಗಿದೆ. ನಮ್ಮ ಅಧ್ಯಯನದ ನೀಲಗುಂದ ಪರಿಸರದಲ್ಲಿ ಹಲವು ರೀತಿಯ ಸ್ಮಾರಕ ಶಾಸನಗಳು ದೊರಕಿದ್ದು, ಅವುಗಳನ್ನು ನನ್ನ ಅಧ್ಯಯನದಲ್ಲಿ ಹಂತ ಹಂತವಾಗಿ ಈ ಕೆಳಗಿನಂತೆ ಚರ್ಚಿಸಿದೆ.

## ವೀರಗಲ್ಲು

ವೀರ : ಮೂಲತಃ ಸಂಸ್ಕೃತ ಭಾಷೆಯ ಪದವಾದ ಈ ವೀರ ಎಂಬುದು ಅನೇಕ ಇಂಡೋ-ಆರ್ಯನ್ ಭಾಷೆಗಳಲ್ಲಿ ಬಳಕೆಯಾಗಿರುವುದಾಗಿ ತಿಳಿದುಬರುತ್ತದೆ. ಈ ಪದವು ವ್ಯಕ್ತಿಯ ಪರಾಕ್ರಮ, ಶಕ್ತಿ ಮುಂತಾದ ಅವನ ದೈಹಿಕ ಗುಣಗಳನ್ನು ಸೂಚಿಸುವ ಗುಣವಾಚಕವಾಗಿ ಬಳಕೆಯಾಗಿದೆ. ಎಲ್ಲೋ ಕೆಲವು ಕಡೆ ವೀರ ಎಂಬ ಪದಕ್ಕೆ ಕೆಲವು ಭಾಷೆಗಳಲ್ಲಿ ಆಡು, ಟಗರು, ಒಂಟೆ, ಸೋದರ ಮುಂತಾದ ಅರ್ಥಗಳು ಬಳಕೆಯಾಗಿದೆ. ಇದೇ ಪದ ಸಂಸ್ಕೃತದಿಂದ ನೇರವಾಗಿ ದ್ರಾವಿಡ ಭಾಷೆಗಳಿಗೆ ತನ್ನ ಮೂಲಾರ್ಥವನ್ನು ಉಳಿಸಿಕೊಂಡು ಬಂದಿದೆ.[೧೯] ಕೆಲವು ಕಡೆ ಇದೇ ಪದ "ಬೀರ" ಎಂಬುದಾಗಿ ತದ್ಭವ ರೂಪವನ್ನು ಪಡೆದು ಬಳಕೆಯಲ್ಲಿರುವುದು ಇದೆ. ಅಂದರೆ ದ್ರಾವಿಡ ಭಾಷೆಗಳಲ್ಲಿ ಈ ಪದ ಸೇರಿ ಹೋಗಿದ್ದರೂ ಅದು ತನ್ನ ಮೂಲಾರ್ಥವನ್ನು ಕಳೆದುಕೊಂಡಿಲ್ಲ ಎಂಬುದು ಮುಖ್ಯ.[೨೦]

ವ್ಯಕ್ತಿ ವಿಶಿಷ್ಟವಾದ ಪರಾಕ್ರಮ, ಯುದ್ಧ ನೈಪುಣ್ಯವಿರುವ ಸಾಹಸ ಅಥವಾ ಉತ್ತಮ ಕೆಲಸಗಳನ್ನು ಮಾಡುವ ಯೋಧ ಮುಂತಾದ ಅರ್ಥಗಳೊಂದಿಗೆ ಹಲವಾರು ಕಡೆ ಪ್ರಯೋಗಿಸಿದೆ. ಆದರೆ ಈ ಪದ ಇನ್ನೊಂದು ಕಡೆಯಲ್ಲಿ ಯಾವುದೇ ಕಾರ್ಯದಲ್ಲಿ ವಿಶಿಷ್ಟವಾದ ಶಕ್ತಿ ಸಾಹಸಗಳನ್ನು ತೋರುವ, ಯಾವುದೇ ವ್ಯಕ್ತಿ ಗಳಿಸಿದ ಯಶಸ್ಸಿಗೆ, ಅವನು ಮಾಡಿದ ಶ್ರೇಷ್ಠ ಕಾರ್ಯಗಳ ಗುಣಗಳನ್ನು ತಿಳಿಸುವ ವಿಶೇಷಣವಾಗಿ ಬಳಕೆಯಾಯಿತು.[೨೧]

ಪ್ರಾಚೀನ ಕಾಲದಿಂದಲೂ ವೀರರರಿಗೆ ಎಂತಹ ಒಂದು ಗೌರವವಿತ್ತು ಎನ್ನುವುದಕ್ಕೆ ಹಲವಾರು ವೀರ ಶಾಸನಗಳಲ್ಲಿ ವೀರರು ತಮ್ಮ ದೇಹ (ಲೌಕಿಕ) ಬದುಕಿನ ಬಗೆಗೆ ಎಂತಹ ಭಾವನೆ ತಾಳಿದರೆಂಬುದರ ಬಗೆಗೆ ವಿಚಾರಗಳು ಬಂದಿವೆ. ಅಂತಹ ವಿಚಾರವನ್ನು ಬಳಸುವ ಈ ಕೆಳಗಿನ ಶ್ಲೋಕವು ಹಲವಾರು ವೀರಗಲ್ಲುಗಳಲ್ಲಿ ಉಲ್ಲೇಖಗೊಂಡಿದೆ.[೨೨]

ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ
ಕ್ಷಣವಿಧ್ವಂಸಿನೀ ಕಾಯೇ ಕಾ ಚಿಂತಾ ಮರಣೇ ರಣೇ||[೨೩]

ಪ್ರಾಚೀನ ಕನ್ನಡಿಗರ ಯೋಧರ ಮನಸ್ಸಿನಲ್ಲಿ ತುಂಬಿಕೊಂಡಿದ್ದ ಭಾವನೆ ಇದು. ಯುದ್ಧದಲ್ಲಿ ಗೆದ್ದರೆ ಲಕ್ಷ್ಮಿ ದೊರಕುವಳು. ಸತ್ತರೆ ಸುರಾಂಗನೆಯರು ದೊರಕುವರು. ದೇಹವು ಕ್ಷಣ ಕಾಲ ವಿಧ್ವಂಸವಾಗುವ ವಸ್ತುವಾದ್ದರಿಂದ ರಣರಂಗದಲ್ಲಿ ಮಡಿಯುವ ವಿಷಯದಲ್ಲಿ ಚಿಂತೆ ಏಕೆ? ಈ ಭಾವನೆಗಳಿಂದ ಉತ್ತೇಜನಗೊಂಡ ಅವರು ಧೈರ್ಯದಿಂದ ರಣರಂಗದಲ್ಲಿ ಮುನ್ನುಗ್ಗಿ ದೇಹವನ್ನು ಹುಲ್ಲಿಗಿಂತ ಕಡೆಯಾಗಿ ಎಣಿಸಿ ಹೋರಾಡಿ ಗೆದ್ದು ಹಿಂದಕ್ಕೆ ಬರುತ್ತಿದ್ದರು ಅಥವಾ ಸೋತು ಯುದ್ಧರಂಗದಲ್ಲಿ ಒರಗುತ್ತಿದ್ದರು. ಇದು ಅವರ ಧೈರ್ಯವನ್ನು ದೇಶಕ್ಕಾಗಿ ಒಡೆಯನಿಗಾಗಿ ಅವರು ತೋರಿಸಿದ ಮಹಾತ್ಯಾಗವನ್ನು ತೋರುತ್ತದೆ. ಒಂದು ಸಂದರ್ಭ ಸೋತು ತಮ್ಮ ಮನೆಗಳಿಗೆ ಹೋದರೆ ತಮ್ಮ ಹೆಂಡತಿಯರೆ ಗಂಡನನ್ನು ಅಪಮಾನ ಮಾಡುತ್ತಿದ್ದರೆಂದು ಶಾಸನಗಳು ಉಲ್ಲೇಖಿಸುತ್ತವೆ. ಉದಾ : ೭ನೇ ಶತಮಾನ ಕಪ್ಪೆ ಅರಭಟನ ಶಾಸನದಲ್ಲಿ ಬರುವ ಶ್ಲೋಕ

"ವರನ್ತೇಜಸ್ವಿನೋ ಮೃತ್ಯುರ್ನತು ಮಾನಾವಖಣ್ಡನಮ್
ಮೃತ್ಯುಸ್ತಳ್ ಕ್ಷಣಿಕೋ ದುಃಖಮ್ಮಾನಭಂಗಂ ದಿನೇ ದಿನೇ"||[೨೪]

ಈ ಶ್ಲೋಕವನ್ನು ಆಗಿನ ಕಾಲದ ರಾಜರು ತಮ್ಮ ಸಾಮ್ರಾಜ್ಯವನ್ನು ರಕ್ಷಣೆ ಮಾಡಿಕೊಳ್ಳುವ ಸಂದರ್ಭ ಬಂದಾಗ ಸೈನಿಕರನ್ನು ಪ್ರಚೋದಿಸುವ ಉದ್ದೇಶದಿಂದ ಶಾಸನದಲ್ಲಿ ಉಲ್ಲೇಖಿಸಿರಬಹುದು.

ವೀರನು ಹೋರಾಟದಲ್ಲಿ ಮರಣ ಹೊಂದಿದ ನಂತರ ಇವರ ಹೆಸರು ಸುಮಾರು ಇಪ್ಪತ್ತು ತಲೆಮಾರುಗಳವರೆಗೂ ಆತನ ಪರಾಕ್ರಮದ ಕೀರ್ತಿ ಶಾಶ್ವತವಾಗಿ ನಿಲ್ಲುವುದೆಂಬ ನಂಬಿಕೆಯಿತ್ತು. ಅಲ್ಲದೆ ಒಬ್ಬ ದೊಡ್ಡ ವಿದ್ವಾಂಸನ ಹೆಸರು ಅಥವಾ ಮಹಾವಾದಿಯ ಹೆಸರು ನಾಡಿನಲ್ಲಿ ಪ್ರಸಾರವಾಗುತ್ತಿತ್ತು, ಅಂದರೆ ಯುದ್ಧದಲ್ಲಿ ಪ್ರಾಣತ್ಯಾಗವನ್ನು ಮಾಡಿದ ವೀರರ ಹೆಸರು ಈ ಲೋಕದಲ್ಲಿ ಮಾತ್ರವಲ್ಲ ಪರಲೋಕದಲ್ಲಿಯೂ ಪಡೆಮಾತಾಗುತ್ತಿತ್ತು. ಅವನನ್ನು ಎಲ್ಲರೂ ಪ್ರಶಂಸಿಸುವವರೇ. ಅವನ ಮೇಲೆ ಕತೆಗಳು ಹುಟ್ಟಿಕೊಳ್ಳುತ್ತಿದ್ದವು. ಈ ಒಂದು ಕಾರಣದಿಂದಲೇ ಪ್ರಪಂಚದಲ್ಲಿ ವೀರಕಾವ್ಯಗಳೆಂಬ ಶಿಷ್ಟ ಮತ್ತು ಜಾನಪದ ಸಾಹಿತ್ಯ ಪ್ರಕಾರಗಳು ಹುಟ್ಟಿಕೊಂಡಿರುವುದು.[೨೫]

## ವೀರಗಲ್ಲುಗಳನ್ನು ಹಾಕಿಸುತ್ತಿದ್ದ ಉದ್ದೇಶ

ವೀರಗಲ್ಲನ್ನು ನಿಲ್ಲಿಸುವಲ್ಲಿ ಅದನ್ನು ನಿಲ್ಲಿಸಿದವರು ಯಾವ ಉದ್ದೇಶಕ್ಕಾಗಿ ನಿಲ್ಲಿಸಿದರು ಎಂಬುದು ಬಹು ಮುಖ್ಯವಾದ ಸಂಗತಿಯಾಗುತ್ತದೆ. ವೀರಗಲ್ಲುಗಳ ಪಾಠದಲ್ಲಿ ತಾವು ಯಾವ ಉದ್ದೇಶಕ್ಕಾಗಿ ವೀರಗಲ್ಲನ್ನು ನಿಲ್ಲಿಸಿದ್ದೇವೆ ಎಂಬ ಅಂಶವನ್ನು ಅದನ್ನು ನಿಲ್ಲಿಸಿದವರಲ್ಲಿ ಕೆಲವರಾದರೂ ಹೇಳಿಕೊಂಡಿದ್ದಾರೆ. ಈ ಮಾಹಿತಿಯ ಹಿನ್ನೆಲೆಯಲ್ಲಿ ವೀರಗಲ್ಲನ್ನು ನಿಲ್ಲಿಸುವಾಗ ಅಂದಿನ ಜನಕ್ಕೆ ಸಾಮಾನ್ಯವಾಗಿ .ಯಾವ ಉದ್ದೇಶವಿತ್ತು ಎಂಬುದನ್ನು ತಿಳಿಯಬಹುದಾಗಿದೆ.

ವೀರಗಲ್ಲನ್ನು ನಿಲ್ಲಿಸುವಲ್ಲಿ ಲೌಕಿಕ ಮತ್ತು ಪರಮಾರ್ಥಿಕ ದೃಷ್ಟಿಗಳೆರಡು ಇತ್ತೆಂದು ತೋರುತ್ತದೆ. ವೀರರ ಪರಾಕ್ರಮವನ್ನು ಮೆಚ್ಚಿ ವೀರಗಲ್ಲನ್ನು ನೆಡುವುದು ಅವನ ಪರಾಕ್ರಮ. ಲೋಕಕ್ಕೂ ತಿಳಿಯಲೆಂದು ನೆಡುವುದು. ಇವು ಲೌಕಿಕ ಉದ್ದೇಶಗಳು. ಮಡಿದ ವೀರನಿಗೆ ವೀರಗಲ್ಲನ್ನು ನಿಲ್ಲಿಸುವುದರ ಮೂಲಕ ಅವನಿಗೆ ಸ್ವರ್ಗವೊ, ಕೈಲಾಸವೊ, ವೈಕುಂಠವೂ ಪ್ರಾಪ್ತವಾಗುತ್ತದೆಯೆಂದು ನಂಬಿ ವೀರಗಲ್ಲುಗಳನ್ನು ನೆಡುವುದು ಪರಮಾರ್ಥಿಕ ಉದ್ದೇಶವಾಗಿದೆ.[೨೬] ಉದಾಹರಣೆಗೆ ಹೋರಾಟದಲ್ಲಿ ಅರಸನ ಪರವಾಗಿಯೇ ಊರಿನ ಹಿತರಕ್ಷಣೆಗಾಗಿಯೇ ಶತ್ರುವಿನಿಂದ ಮಾಡಿದಾಗ ಇವನ ಹೆಸರಿನಲ್ಲಿ ವೀರಗಲ್ಲು ನಿಲ್ಲಿಸುತ್ತಿದ್ದರು.

ನೀಲಗುಂದ ಪರಿಸರದಲ್ಲಿ ಹಲವು ವೀರಗಲ್ಲುಗಳು ದೊರಕಿವೆ. ಅವುಗಳಲ್ಲಿ ಪ್ರಮುಖ ದೇವಾಲಯಗಳಾದ ನೀಲಗುಂದದ ಮುಕ್ತಿ ರಾಮೇಶ್ವರ ದೇವಾಲಯದಲ್ಲಿ ಎರಡು ವೀರಗಲ್ಲು, ಕುಂಚೂರು ಮಲ್ಲಿಕಾರ್ಜುನ ದೇವಾಲಯದ ಬಲಭಾಗದಲ್ಲಿ ವೀರಗಲ್ಲುಗಳ ಗುಂಪು ಕಂಡುಬರುತ್ತದೆ. ಹಲುವಾಗಲು ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿ ೨ ವೀರಗಲ್ಲು, ಆಂಜನೇಯ ದೇವಾಲಯದಲ್ಲಿ ೨ ವೀರಗಲ್ಲು ಇದೆ. ಚಿರಸ್ತಹಳ್ಳಿ ಶಂಕರಲಿಂಗ ದೇವಾಲಯದ ಮುಂಭಾಗದಲ್ಲಿ ಎರಡು ವೀರಗಲ್ಲು ಕಾಣಬಹುದು. ಈ ಎಲ್ಲಾ ವೀರಗಲ್ಲುಗಳನ್ನು ಗಮನಿಸಿದಾಗ ಶಿವ ದೇವಾಲಯಗಳ ಬಳಿಯಂತೂ ವೀರಗಲ್ಲುಗಳು ಸಾಮಾನ್ಯವಾಗಿ ಇದ್ದೇ ಇರುತ್ತವೆ ಎಂದರೆ ತಪ್ಪಾಗಲಾರದು.

ಪ್ರಸ್ತುತ ಈ ಪ್ರಮುಖ ದೇವಾಲಯಗಳ ಮುಂಭಾಗದಲ್ಲಿ ಇರುವ ಎಲ್ಲ ವೀರಗಲ್ಲುಗಳನ್ನು ಅದೇ ದೇವಾಲಯಗಳ ಮುಂದೆ ಮೊದಲಿಗೆ ನೆಟ್ಟಿದ್ದರು ಎಂಬುದಾಗಿ ಹೇಳಲು ಬರುವುದಿಲ್ಲ. ಏಕೆಂದರೆ ಕಾಲಾನಂತರದಲ್ಲಿ ಎಲ್ಲಿಯೇ ಬಿದ್ದಿರುವ ವೀರಗಲ್ಲುಗಳನ್ನು ದೇವರುಗಳೆಂದೂ ಅವುಗಳನ್ನು ಸಂರಕ್ಷಿಸಬೇಕು ಎಂಬ ದೃಷ್ಟಿಯಿಂದಲೋ ಜನರ ಈ ದೇವಾಲಯದ ಬಳಿ ತಂದು ನಿಲ್ಲಿಸಿರಬಹುದಾದ ಸಾಧ್ಯತೆಗಳೂ ಇವೆ. ಕೆಲವಾರು ವೀರಗಲ್ಲುಗಳ ಪಾಠದಿಂದ ವೀರಗಲ್ಲನ್ನು ನಿಲ್ಲಿಸುವಾಗಲೇ ಅಂದಿನ ಜನತೆ ವೀರಗಲ್ಲುಗಳನ್ನು ದೇವಾಲಯದ ಮುಂದೆ ನಿಲ್ಲಿಸುತ್ತಿದ್ದರೆಂಬ ಅಂಶ ತಿಳಿಯುತ್ತದೆ.[೨೭]

ವೀರಗಲ್ಲುಗಳನ್ನು ದೇವಾಲಯಗಳ ಮುಂದೆ ಏಕೆ ನೆಡುತ್ತಿದ್ದರು ಎಂಬುದು ವಿಚಾರ ಮಾಡಬೇಕಾದ ಸಂಗತಿ. ವೀರಗಲ್ಲುಗಳನ್ನು ದೇವಾಲಯಗಳ ಮುಂದೆ ನಿಲ್ಲಿಸುವಲ್ಲಿ ಅವರ ಮುಖ್ಯ ಉದ್ದೇಶ, ವೀರನು ದೇವರ ಸನ್ನಿಧಿಯಲ್ಲಿರುತ್ತಾನೆ ಎಂಬ ನಂಬಿಕೆ ಪ್ರಮುಖವಾದುದು. ಜೊತೆಗೆ ವೀರಗಲ್ಲಿನ ಆರಾಧನೆ ಒಂದು ನಿಯತ ಕಾಲದಲ್ಲಿ ನಡೆಯಬೇಕಾದ ಆಚರಣೆಯೆಂದು ಭಾವಿಸಿ, ಈ ದೇವಾಲಯ ಮತ್ತು ವೀರರ ಸ್ಮಾರಕ ಒಂದೆಡೆಗೆ ಇರುವುದರ ಅನುಕೂಲತೆಯೂ ಅವರಿಗೆ ಕಂಡಿರಬೇಕು. ಆದುದರಿಂದ ದೇವಾಲಯಗಳಿಗೆ ಜನರು ಹೋಗುತ್ತಿದ್ದ ಕಾರಣದಿಂದಾಗಿ ಅವರಿಗೆ ಅನಾಯಾಸವಾಗಿ ವೀರನ ಪರಾಕ್ರಮದ ಪರಿಚಯವೂ ಆಗುತ್ತದೆ ಎಂಬುವುದಾಗಿ ಅವರು ಭಾವಿಸಿರಬೇಕು. ಅಂದರೆ ವೀರಗಲ್ಲುಗಳನ್ನು ದೇವಾಲಯಗಳ ಮುಂದೆ ನಿಲ್ಲಿಸುವಲ್ಲಿ ಮುಖ್ಯವಾಗಿ ಧಾರ್ಮಿಕತೆಯೇ ಪ್ರಧಾನ ಅಂಶವಾಗಿತ್ತೆಂದು ತೋರುತ್ತದೆ.[೨೮]

ಈ ಪರಿಸರದಲ್ಲಿ ದೇವಾಲಯಗಳ ಬಳಿ ಮಾತ್ರವಲ್ಲದೆ ಇತರ ಕಡೆಗಳಲ್ಲಿಯೂ ಸಾಮಾನ್ಯವಾಗಿ ಗಮನಿಸಿಬಹುದು. ಊರ ಬಾಗಿಲ ಮುಂದೆ ಚಾವಡಿಗಳಲ್ಲಿ ಹೊಂಡಗಳ ಬಳಿ ಹೊಲ, ಗದ್ದೆ, ತೋಟ, ತೋಪು, ಮೈದಾನಗಳಲ್ಲಿ ವೀರಗಲ್ಲುಗಳನ್ನು ನಿಲ್ಲಿಸಿರುವುದು ಕಾಣಬಹುದು.

ಒಟ್ಟಾರೆ ವೀರಗಲ್ಲುಗಳನ್ನು ಸಾಮಾನ್ಯವಾಗಿ ವೀರನ ಸ್ವಂತ ಗ್ರಾಮದಲ್ಲಿ ಹಾಕಿಸುತ್ತಿದ್ದರು. ಹೀಗೆ ಹಾಕಿಸಿರುವ ವೀರಗಲ್ಲುಗಳು ದೇವಾಲಯದ ಮುಂದೆ ಇರಬಹುದು, ನಿರ್ದಿಷ್ಟ ಸ್ಥಳದಲ್ಲಿರಬಹುದು ಅಥವಾ ಜನರ ಕಣ್ಣಿಗೆ ಪದೇ ಪದೇ ಬೀಳುವಂತಹ ಕಡೆಗಳಲ್ಲಿರಬಹುದು.

ಇನ್ನೂ ಕೆಲವು ವೀರಗಲ್ಲುಗಳು ಗದ್ದೆ, ಹೊಲಗಳಲ್ಲಿ ದೊರೆಯುವುದರಿಂದ ಬಹುಶಃ ವೀರನಿಗೆ ಬಿಟ್ಟ ದತ್ತಿಯ ಬಳಿಯೇ ಆ ವೀರಗಲ್ಲನ್ನು ಹಾಕಿಸುತ್ತಿದ್ದಿರಬೇಕೆಂದು (ದೃಢಪಡಿಸಲಾಗಿದೆ) ತೋರುತ್ತದೆ.

ನೀಲಗುಂದ ಪರಿಸರ ಬರುವ ವೀರಗಲ್ಲುಗಳು ಹಲವು ಅರಸು ಮನೆತನಗಳ ಅವಧಿಯಲ್ಲಿ ನಿರ್ಮಾಣವಾಗಿವೆ. ಮೊದಲನೆಯಾಗಿ ರಾಷ್ಟ್ರಕೂಟ ಕಾಲದ ವೀರಗಲ್ಲು ಚಿರಸ್ತಹಳ್ಳಿ ಮತ್ತು ನೀಲಗುಂದ ಕಂಡುಬಂದಿವೆ. ಇವುಗಳಲ್ಲಿ ಸಾಮಾನ್ಯವಾಗಿ ಕಪ್ಪುಶಿಲೆಯನ್ನು ಬಳಸಿದ್ದಾರೆ. ಇವರ ಕಾಲದ ರಚನೆಯಾಗಿರುವ ಪ್ರದೇಶದಲ್ಲಿ ಬಹುಪಾಲು ವೀರಗಲ್ಲುಗಳು ಬೃಹದಾಕಾರವನ್ನು ಅಂದರೆ ಸುಮಾರು ೬ ಅಡಿ ಎತ್ತರ, ೨ ಅಡಿ ಅಗಲವನ್ನು ಹೊಂದಿವೆ. ಶಿಲ್ಪದ ಬಗ್ಗೆ ಹೇಳುವುದಾದರೆ, ಇವರ ಕಾಲದ ವೀರಗಲ್ಲುಗಳಲ್ಲಿ ಕುಸುರಿ ಕೆಲಸ ಕಂಡುಬರುವುದಿಲ್ಲ. ಆದರೂ ಇವು ತಮ್ಮ ದಿಟ್ಟವಾದ ಶಿಲ್ಪದಿಂದ ಗಂಭೀರ ಭಾವವನ್ನು ಹೊಂದಿವೆ. ಯುದ್ಧ ಚಿತ್ರಣದಲ್ಲಿ ಹೋರಾಡುವ ವೀರರಿಗೆ ಪ್ರಾಶಸ್ತ್ಯ ದೊರೆತಿದೆ. ಇದರ ಮತ್ತೊಂದು ವೈಶಿಷ್ಟ್ಯವೆಂದರೆ ವೀರರನ್ನು ಚಿತ್ರಿಸುವಾಗ ಚಲನೆ ಮತ್ತು ಕ್ರಿಯೆಗಳಿಗೆ ಗಮನಕೊಟ್ಟಿರುವುದು. ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವ ವಿವರಗಳನ್ನು ಬಿಡಿಸುವಲ್ಲಿ ಆಕಾಶದ ಪರಿಣಾಮಕಾರಿ ಚಿತ್ರಣವನ್ನು ಶಿಲ್ಪದಲ್ಲಿ ಮಾಡಿದ್ದಾರೆ. ಮೋಡಗಳನ್ನು ಸಂಕೇತದ ಮೂಲಕ ತೋರಿಸಿದ್ದಾರೆ. ವೀರನನ್ನು ಕೊಂಡೊಯ್ಯುವಲ್ಲಿ ಅಪ್ಸರೆಯರು, ಗಂಧರ್ವರು ವಾದ್ಯಗಳನ್ನು ನುಡಿಸುತ್ತ, ಪುಷ್ಪವೃಷ್ಟಿಯನ್ನು ಮಾಡುತ್ತಿರುವಂತೆ ವಿವರಗಳನ್ನು ಬಿಡಿಸುವ ಒಂದು ಪ್ರಯತ್ನ ರಾಷ್ಟ್ರಕೂಟರ ಕಾಲದಲ್ಲಿ ನಡೆದಿರಬೇಕೆಂದೆನಿಸುತ್ತದೆ.

ಈ ವೀರನು ಸ್ವರ್ಗದಲ್ಲಿ ಸುಖಾಸನದಲ್ಲಿರುವಂತೆ ಸಾಮಾನ್ಯವಾಗಿ ಬಿಡಿಸಲಾಗಿದ್ದರೂ ಈ ಒಂದು ವೀರಗಲ್ಲಿನಲ್ಲಿ ಮಾತ್ರ ವೀರನು ಶಿವಲಿಂಗದ ಬಳಿ ಕುಳಿತಿರುವಂತೆ ಬಿಡಿಸಲಾಗಿದೆ. ವೀರಗಲ್ಲುಗಳ ಮೇಲ್ಭಾಗದಲ್ಲಿ ದೇವಾಲಯದ ಗೋಪುರದ ಚಿತ್ರಣ ಕಾಣಬಹುದು.

## ಚಿರಸ್ತಹಳ್ಳಿ ವೀರಗಲ್ಲು

ಈ ವೀರಗಲ್ಲು ಸುಮಾರು ೮ ಅಡಿ ಎತ್ತರವಿದ್ದು ೨ ಅಡಿ ಅಗಲವನ್ನು ಹೊಂದಿದೆ. ಈ ವೀರಗಲ್ಲು ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣವಾಗಿರಬಹುದು. ಈ ವೀರಗಲ್ಲು ಚಿರಸ್ತಹಳ್ಳಿ

ಶಂಕರಲಿಂಗ ದೇವಾಲಯ ಮುಂಭಾಗದಲ್ಲಿ ಮೇಲೆ ಮುಖವಾಗಿ ಬಿದ್ದಿದೆ. ಇದು ಮೂರು ಹಂತದಲ್ಲಿ ರಚನೆಯಾಗಿದೆ.

ಮೊದಲನೆಯ ಹಂತದಲ್ಲಿ ಒಬ್ಬ ವೀರನು ಇಬ್ಬರು ಶತ್ರುಗಳೊಂದಿಗೆ ಹೋರಾಟ ಮಾಡುವ ದೃಶ್ಯವಿದೆ. ಎರಡನೆ ಹಂತದಲ್ಲಿ ಮರಣ ಹೊಂದಿದ ವೀರನನ್ನು ಅಪ್ಸರೆಯರು ಹೆಗಲ ಮೇಲೆ ಎರಡು ಕೈಗಳನ್ನು ಹಾಕಿಕೊಂಡು ಮೋಡಗಳ ನಡುವೆ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವಂತೆ ಚಿತ್ರಿಸಲಾಗಿದೆ. ಮೂರನೇ ಹಂತದಲ್ಲಿ ಶಿವಲಿಂಗದ ಬಳಿ ಯತಿಗಳು ಪೂಜೆ ಮಾಡುತ್ತಿರುವ ಶಿಲ್ಪವಿದೆ. ಅವರ ಬಳಿ ವೀರನು ಕೈಮುಗಿದುಕೊಂಡು ಕುಳಿತಿದ್ದಾನೆ.

ಅದೇ ದೇವಾಲಯ ಮುಂಭಾಗದ ಇನ್ನೊಂದು ವೀರಗಲ್ಲು ಸುಮಾರು ೬ ಅಡಿ ಎತ್ತರ ೨ ಅಡಿ ಅಗಲವನ್ನು ಹೊಂದಿದೆ. ಇದು ಕೂಡ ರಾಷ್ಟ್ರಕೂಟರ ಕಾಲದ ವೀರಗಲ್ಲು ಆಗಿದೆ. ಇದಕ್ಕೆ ಕಪ್ಪು ಬಳಪದ ಕಲ್ಲನ್ನು ಬಳಸಲಾಗಿದೆ. ಇದು ಮೂರು ಹಂತದಲ್ಲಿ ರಚನೆಯಾಗಿದೆ. ಮೊದಲನೆ ಹಂತದಲ್ಲಿ-ತುರುಗಳ ಚಿತ್ರಣವಿದ್ದು, ಇದು ತುರುಗಾಳಗವನ್ನು ಸಂಕೇತಿಸುತ್ತದೆ. ಇಲ್ಲಿ ವೀರನ ಶಿಲ್ಪ ತ್ರುಟಿತಗೊಂಡಿದೆ. ಶತ್ರುಗಳೊಡನೆ ಕುದುರೆಯನ್ನೇರಿ ಹೋರಾಡುತ್ತಿರುವುದು ಕಂಡುಬರುವುದು. ಎರಡನೆಯ ಹಂತದಲ್ಲಿ ಮರಣ ಹೊಂದಿದ ವೀರನನ್ನು ಅಪ್ಸರೆಯರು ಎರಡು ಕೈಗಳನ್ನು ಹಿಡಿದುಕೊಂಡು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವಂತೆ ಚಿತ್ರಿಸಲಾಗಿದೆ. ಅವರ ಎರಡು ಕಡೆ ಚಾಮರ ಬೀಸುತ್ತಿರುವ ಚಿತ್ರಣ ಇದೆ. ಮೂರನೆಯ ಹಂತದಲ್ಲಿ ಶಿವನ ಬಳಿ ಜಪಿಸುತ್ತ ನಿಂತಿರುವ ವೀರನನ್ನು ಕೆತ್ತಲಾಗಿದೆ.

## ನೀಲಗುಂದ ಮುಕ್ತಿ ರಾಮೇಶ್ವರ ದೇವಾಲಯದ ಮುಂಭಾಗದ ವೀರಗಲ್ಲು

ಈ ವೀರಗಲ್ಲು ಸುಮಾರು ೬ ಅಡಿ ಎತ್ತರವಿದ್ದು ೨ ಅಡಿ ಅಗಲವನ್ನು ಹೊಂದಿದೆ. ಈ ವೀರಗಲ್ಲು ರಾಷ್ಟ್ರಕೂಟರ ಕಾಲದ ವೀರಗಲ್ಲು ಆಗಿರಬಹುದು. ಈ ವೀರಗಲ್ಲು ಮೂರು ಹಂತದಲ್ಲಿ ರಚನೆಯಾಗಿದೆ.

ಮೊದಲನೆ ಹಂತದಲ್ಲಿ ಒಂದು ಕಡೆ ಕುದುರೆಗಳು ಸಾಲಾಗಿ ನಿಂತಿದ್ದು, ವೀರನು ಶತ್ರುಗಳನ್ನು ತನ್ನ ಆಯುಧವಾದ ಈಟಿಯಿಂದ ಇರಿಯುತ್ತಿರುವನು. ಕೆಳಭಾಗದಲ್ಲಿ ಮರಣ ಹೊಂದಿದ ಶರೀರದ ಚಿತ್ರಣವನ್ನು ಚಿತ್ರಿಸಲಾಗಿದೆ. ಎರಡನೆ ಹಂತದಲ್ಲಿ ವೀರನನ್ನು ಅಪ್ಸರೆಯರು ತಮ್ಮ ಕೈಗಳಲ್ಲಿ ಹೆಗಲ ಮೇಲೆ ಹಾಕಿಕೊಂಡು ಸ್ವರ್ಗಕ್ಕೆ ಹಾರುತ್ತಿರುವ ದೃಶ್ಯವಿದೆ. ಮೂರನೆಯ ಹಂತದಲ್ಲಿ ಶಿವನ ಬಳಿ ಐಕ್ಯವಾದ ವೀರನನ್ನು ದೇವಲೋಕದ ಅಪ್ಸರೆಯರು ಚಾಮರ ಬೀಸುತ್ತಿರುವ ಚಿತ್ರಣ ವೈಶಿಷ್ಟ್ಯವೆನ್ನಿಸಿದೆ. ಈ ವೀರಗಲ್ಲಿನ ಮೇಲುಭಾಗದಲ್ಲಿ ಸ್ವಲ್ಪ ಅಲಂಕಾರವನ್ನು ಮಾಡಿರುವುದು ಕಂಡುಬರುತ್ತದೆ.

## ಕುಂಚೂರು ವೀರಗಲ್ಲು

ಈ ವೀರಗಲ್ಲು ಸುಮಾರು ೨ ಅಡಿ ಎತ್ತರ ೧೨ ಅಡಿ ಅಗಲವನ್ನು ಹೊಂದಿದೆ. ಈ ವೀರಗಲ್ಲು ಯಾದವರ ಆಳ್ವಿಕೆ ಅವಧಿಯಲ್ಲಿ ನಿರ್ಮಾಣವಾಗಿರಬಹುದು. ಇದು ಕುಂಚೂರು ಮಲ್ಲಿಕಾರ್ಜುನ ದೇವಾಲಯದ ಬಲಭಾಗದಲ್ಲಿ ಕಂಡುಬಂದಿದೆ.

ಇದರಲ್ಲಿ ವೀರನು ದಕ್ಷಿಣ ಅಭಿಮುಖವಾಗಿ ನಿಂತಿದ್ದು ವೀರನ ಕೈಯಲ್ಲಿ ಪ್ರಮುಖ ಆಯುಧಗಳಾದ ಬಿಲ್ಲು ಮತ್ತು ಬಾಣಗಳನ್ನು ಹಿಡಿದುಕೊಂಡು ಗಂಭೀರವಾಗಿ ನಿಂತಿರುವ ಭಂಗಿಯಲ್ಲಿದೆ. ಈ ವೀರಗಲ್ಲಿನ ಪಕ್ಕದಲ್ಲಿ ಮೂರು ಹಂತದಲ್ಲಿ ರಚನೆಯಾಗಿರುವ ವೀರಗಲ್ಲುಗಳ ಗುಂಪು ಇದೆ. ಮೊದಲನೆಯ ಹಂತದಲ್ಲಿ ಶತ್ರುಗಳೊಂದಿಗೆ ವೀರನು ಹೋರಾಟ ಮಾಡುವ ದೃಶ್ಯ ಕಂಡುಬರುತ್ತದೆ. ಎರಡನೆಯ ಹಂತದಲ್ಲಿ ಮರಣ ಹೊಂದಿದ ವೀರನನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಇಬ್ಬರು ಚಾಮರವನ್ನು ಬೀಸುತ್ತ, ಸ್ವರ್ಗಕ್ಕೆ ಕರೆದೊಯ್ಯುವುದು. ಮೂರನೆಯ ಹಂತದಲ್ಲಿ ಶಿವಲಿಂಗದ ಬಳಿ ಯತಿಯು ಪೂಜೆ ಮಾಡುತ್ತಿರುವ ಶಿಲ್ಪವಿದೆ. ಪಕ್ಕದಲ್ಲಿ ವೀರನು ಕೈಮುಗಿದುಕೊಂಡು ಕುಳಿತಿದ್ದಾನೆ. ಅದರ ಮುಂದೆ ನಂದಿಮೂರ್ತಿಶಿಲ್ಪ ಕಂಡುಬರುತ್ತದೆ. ಈ ವೀರಗಲ್ಲಿನಂತೆ ಉಳಿದ ವೀರಗಲ್ಲುಗಳು ಇದರ ಮಾದರಿಯಲ್ಲಿ ರಚನೆಗೊಂಡಿದೆ.

## ಹಲುವಾಗಲು ವೀರಗಲ್ಲು

ಈ ವೀರಗಲ್ಲು ಸುಮಾರು ೬ ಅಡಿ ಎತ್ತರವಿದ್ದು, ೨ ಅಡಿ ಅಗಲವನ್ನು ಹೊಂದಿದೆ. ಇದು ಯಾದವರ ದೊರೆಯಾದ ರಾಮಚಂದ್ರರಾಯನ ರಾಜ್ಯದ ರಕ್ಷಣೆಗಾಗಿ ಹೋರಾಡಿ ಪ್ರಾಣ ತೆತ್ತ ಸಜೆಯ ಮಲ್ಲಯ್ಯನನ್ನು ಈ ವೀರಗಲ್ಲು ಉಲ್ಲೇಖಿಸುತ್ತದೆ. ಈ ವೀರಗಲ್ಲು ಹಲುವಾಗಲು ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿ ದಕ್ಷಿಣ ಅಭಿಮುಖವಾಗಿ ನಿಲ್ಲಿಸಲಾಗಿದೆ. ಈ ವೀರಗಲ್ಲು ಮೂರು ಹಂತದಲ್ಲಿ ರಚನೆಯಾಗಿದೆ.

ಮೊದಲನೆಯ ಹಂತದಲ್ಲಿ ವೀರನು (ಕುದುರೆಯನ್ನೇರಿ) ಇಬ್ಬರು ಶತ್ರುಗಳೊಂದಿಗೆ ಹೋರಾಡುತ್ತಿರುವುದು. ಅದರ ಪಕ್ಕ ಅನೇಕ ವೀರರು ನೆಲದ ಮೇಲೆ ನಿಂತು ಶತ್ರುಗಳನ್ನು ಹೊಡೆದು ಹಾಕುತ್ತಿರುವ ದೃಶ್ಯ ಚಿತ್ರಿಸಲಾಗಿದೆ. ಎರಡನೆ ಹಂತದಲ್ಲಿ ಮರಣ ಹೊಂದಿದ ವೀರನನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಚಾಮರವನ್ನು ಬೀಸುತ್ತ, ವಾದ್ಯಗಾರರೊಂದಿಗೆ ಇರುವಂತೆ ಕೆತ್ತಲಾಗಿದೆ. ಮೂರನೆ ಹಂತದಲ್ಲಿ ಶಿವಲಿಂಗಕ್ಕೆ ಯತಿಯು ಪೂಜೆ ಮಾಡುತ್ತಿರುವ ಶಿಲ್ಪವಿದೆ. ಪಕ್ಕದಲ್ಲಿ ವೀರನು ಕೈಮುಗಿದುಕೊಂಡು ಕುಳಿತಿದ್ದಾನೆ, ಅದರ ಮುಂದೆ ನಂದಿಶಿಲ್ಪ ಕಂಡುಬಂದಿದೆ. ಇದರ ಮೇಲುಭಾಗ ಉಗ್ರನರಸಿಂಹ ಆಕಾರ ಪ್ರಭಾವಳಿ ಕೆತ್ತಲಾಗಿದೆ. ಅದರ ಮೇಲೆ ಸೂರ್ಯ ಮತ್ತು ಚಂದ್ರ ಶಿಲ್ಪ ಕಂಡುಬಂದಿದೆ.

ಇದೇ ಸ್ಥಳದಲ್ಲಿ ಇನ್ನೊಂದು ವೀರಗಲ್ಲು ಸುಮಾರು ೬ ಅಡಿ ಎತ್ತರ ೨ ಅಡಿ ಅಗಲವನ್ನು ಹೊಂದಿದೆ. ಇದು ಯಾದವರ ಆಳ್ವಿಕೆ ಕಾಲದಲ್ಲಿ ನಿರ್ಮಾಣವಾಗಿರಬಹುದು. ಇದರ ಕಾಲ ಕ್ರಿ.ಶ.೧೨ನೇ ಶತಮಾನದ ಕೊನೆಯ ಭಾಗ. ಈ ವೀರಗಲ್ಲು ಮೂರು ಹಂತದಲ್ಲಿ ರಚನೆಯಾಗಿದೆ.

ಮೊದಲನೆ ಹಂತದಲ್ಲಿ ಅನೇಕ ವೀರರು ಮತ್ತು ಶತ್ರುಗಳು ಕುದುರೆಯನ್ನೇರಿ ಹೋರಾಟ ಮಾಡುವುದು. ಒಬ್ಬ ಯೋಧ ಆಯುಧವನ್ನು ಶತ್ರುವಿನ ದೇಹಕ್ಕೆ ಇರಿದ ದೃಶ್ಯವಿದೆ. ಅನೇಕ ವೀರರು ಮತ್ತು ಶತ್ರುಗಳು ಮರಣ ಹೊಂದಿ ಬಿದ್ದಿರುವಂತೆ ಚಿತ್ರಿಸಲಾಗಿದೆ. ಎರಡನೆ ಹಂತದಲ್ಲಿ ಮರಣ ಹೊಂದಿದ ಮೂರು ಜನ ವೀರರನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿ ಕುಳಿರಿಸಿಕೊಂಡು ಚಾಮರವನ್ನು ಬೀಸುತ್ತಿರುವ ಶಿಲ್ಪ ಕಂಡುಬಂದಿದೆ. ಮೂರನೆ ಹಂತದಲ್ಲಿ ಶಿವಲಿಂಗಕ್ಕೆ ಯತಿಯು ಪೂಜೆ ಮಾಡುತ್ತಿದ್ದಾನೆ. ಅದರ ಪಕ್ಕದಲ್ಲಿ ವೀರರು ಕೈ ಮುಗಿದುಕೊಂಡು ನಿಂತಿದ್ದಾರೆ. ಅದರ ಕೆಳಭಾಗದಲ್ಲಿ ನಂದಿ ಶಿಲ್ಪವಿದೆ. ಅದರ ಬಲಭಾಗದಲ್ಲಿ ಮೂರು ಜನ ವೀರರು ಕೈಮುಗಿದುಕೊಂಡು ಕುಳಿತಿರುವ ಶಿಲ್ಪವಿದೆ.

ನಾಲ್ಕನೆಯ ಹಂತದಲ್ಲಿ ಮಂಟಪದಂತೆ ಕೆತ್ತಲಾಗಿದ್ದು, ತುಂಬಿಟ್ಟ ಕಳಸ ಶಿಲ್ಪವಿದೆ. ಅದರ ಅಕ್ಕ ಪಕ್ಕ ಸೂರ್ಯ ಮತ್ತು ಚಂದ್ರ ಶಿಲ್ಪಗಳಿವೆ.

## ಇತರೆ ಸ್ಮಾರಕಗಳು

### ತುರುಗೋಳ್ ಶಾಸನ

ಹೋರಾಟದ ಪ್ರಭೇದಗಳಲ್ಲಿ ಅತಿ ಮುಖ್ಯವಾದುದು ತುರುಗೋಳ (ತುಱು+ಕೋಳ್- ಎಂಬುದು ತೆಗೆದುಕೋ ಎಂಬರ್ಥದ 'ಕೊಳ್' ಧಾತುವಿನ ಭಾವನಾಮ) ಕಳ್ಳರು ಬಂದು ದನಗಳನ್ನು ಎಮ್ಮೆಗಳನ್ನು ಕದಿಯುತ್ತಿದ್ದಾಗ ದನಗಳನ್ನು ರಕ್ಷಿಸಲು ನಡೆದ ಯುದ್ಧವನ್ನು ತುರಗೋಳ್ ಯುದ್ಧ ಎಂದು ಶಾಸನಗಳು ಕರೆದಿವೆ. ಭರತ ಖಂಡದಲ್ಲಿ ಹಸುಗಳನ್ನು ಒಂದು ಐಶ್ವರ್ಯವೆಂದೇ ಬಹಳ ಕಾಲದಿಂದ ಭಾವಿಸಿದ್ದಾರೆ. (ಗೋವುಗಳನ್ನು ಕದಿಯುವುದು ಕಳ್ಳರಿಗೆ ಬಹು ಪ್ರಿಯವಾಗಿತ್ತು. ಪ್ರಾಚೀನ ಕರ್ನಾಟಕದಲ್ಲಿ ಜನರಿಗಿಂತ ದನಗಳು ಹೆಚ್ಚು ಆಕರ್ಷಿತ ಸ್ಥಿತಿಯಲ್ಲಿದ್ದಂತೆ ಊಹಿಸಬಹುದು. ಕಳ್ಳರು ಬಂದು ಕದ್ದಾಗ ಗೋವುಗಳನ್ನು ಕಾಯುತ್ತಿದ್ದ ಗೋವಳರು ಮತ್ತು ಇತರರು ಹುಯ್ಯಲನ್ನೆಬ್ಬಿಸುತ್ತಿದ್ದರು. (ತುರುಗೋಳಿಗೆ ಹೊಯ್ಯಲು ಎಂಬ ಹೆಸರು ಇದೆ) ಊರಿನ ಜನರು ಅವುಗಳನ್ನು ರಕ್ಷಿಸಲು ಮುಂದಾಗುತ್ತಿದ್ದರು. ಈ ಸಮಯದಲ್ಲಿ ಹೋರಾಡಿ ಮಡಿದವರ ಸ್ಮಾರಕಗಳು ನೂರಾರು ದೊರೆಯುತ್ತವೆ. ತುರುಗೋಳಲ್ಲಿ ಶೌರ್ಯವನ್ನು ಮೆರೆಯದವರನ್ನು ಹೇಡಿಯೆಂದೇ ಜನರು ಭಾವಿಸುತ್ತಿದ್ದರು.

ಮೊದಲನೆಯದಾಗಿ ಗೋವು ಪೂಜನೀಯವಾದುದು. ಎರಡನೆಯದಾಗಿ ಎಂದೂ ಕಳೆದುಕೊಳ್ಳಲಾಗದ ಆಸ್ತಿ. ಮೂರನೆಯದಾಗಿ ಅವುಗಳನ್ನು ಕಳೆದುಕೊಳ್ಳುವುದರಲ್ಲಿ ಊರಿನ ವ್ಯಕ್ತಿಯ ಮಾನಾವಮಾನದ ಪ್ರಶ್ನೆಯೂ ಇರುತ್ತಿತ್ತು.

## ನೀಲಗುಂದದ ಮುಕ್ತೇಶ್ವರ ದೇವಾಲಯದ ಹೊರಗಡೆಯ ಶಾಸನ

ಈ ವೀರಗಲ್ಲು ಸುಮಾರು ೪ ಅಡಿ ಎತ್ತರವಿದ್ದು ೨ ಅಡಿ ಅಗಲವನ್ನು ಹೊಂದಿದೆ. ಈ ಇಂದು ರಾಷ್ಟ್ರಕೂಟರ ಕಾಲ ಕ್ರಿ.ಶ. ೧೦ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ಈ ವೀರಗಲ್ಲು ನೀಲಗುಂದ ಮುಕ್ತಿರಾಮೇಶ್ವರ ದೇವಾಲಯದ ಮುಂಭಾಗದಲ್ಲಿ ಕಂಡುಬಂದಿದೆ. ಇದರಲ್ಲಿ ಚಯರಿದಿಯ ರಸನ ಮಗ ಮರೆಯಾಳ್ವನು ನೀಗ್ಗಂದ ಗೋವುಗಳನ್ನು ರಕ್ಷಿಸಲು ಬನವಾಸಿ ಸಾಡಿನಲ್ಲಿ ಹೋರಾಡಿದಾಗ ನೀಲಗುಂದ ಮೂಲಗ ಕಲ್ಲುಗಂಗನು ಮರಣ ಹೊಂದಿದನೆಂದು ಈ ಶಾಸನ ತಿಳಿಸುತ್ತದೆ. ಇದರಲ್ಲಿ ಮೂರು ಹಂತಗಳಿವೆ.

ಮೊದಲನೆಯ ಹಂತದಲ್ಲಿ ತುರುಗಳ ಚಿತ್ರವಿದ್ದು ಇದು ತುರುಗಾಳವನ್ನು ಸಂಕೇತಿಸುತ್ತದೆ. ಇಲ್ಲಿ ವೀರನು ಶತ್ರುಗಳೊಡನೆ ಹೋರಾಟ ಮಾಡುವ ದೃಶ್ಯವನ್ನು ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ಮರಣ ಹೊಂದಿದ ವೀರನನ್ನು ಅಪ್ಸರೆಯರು ಎರಡು ಕೈಗಳನ್ನು ಹಿಡಿದುಕೊಂಡು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವಂತೆ ಚಿತ್ರಿಸಲಾಗಿದೆ. ಮೂರನೆಯ ಹಂತದಲ್ಲಿ ಶಿವನ ಬಳಿಯ ಐಕ್ಯನಾದ ಅಪ್ಸರೆಯರು ಚಾಮರವನ್ನು ಬೀಸುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಮೇಲು ಭಾಗದಲ್ಲಿ ಸ್ವಲ್ಪ ಅಲಂಕಾರವನ್ನು ಮಾಡಿದ್ದಾರೆ.

ಈ ವೀರಗಲ್ಲು ಸುಮಾರು ೪ ಅಡಿ ಉತ್ತರವಿದ್ದು, ೧ ಅಡಿ ಅಗಲವನ್ನು ಹೊಂದಿದೆ. ಈ ಇದು ರಾಷ್ಟ್ರಕೂಟರ ಕಾಲ ಕ್ರಿ.ಶ.೧೦ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ಇದು (ಅಪ್ರಕಟಿತ) ನೀಲಗುಂದ ಭೀಮೇಶ್ವರ ದೇವಾಲಯ ಆವರಣದಲ್ಲಿ ಕಂಡುಬರುತ್ತದೆ. ಇದು ನಾಲ್ಕು ಹಂತದಲ್ಲಿ ರಚನೆಗೊಂಡಿದೆ. ಮೊದಲನೆ ಹಂತದಲ್ಲಿ ವೀರನು ಶತ್ರುಗಳೊಂದಿಗೆ ಹೋರಾಡುತ್ತಿರುವನು. ಆದರೆ ಈ ಭಾಗದ ಶಿಲ್ಪವು ತ್ರುಟಿತಗೊಂಡಿದೆ.

## ೩.೩. ಶಾಸನ ಸಾಹಿತ್ಯ

ನೀಲಗುಂದವು ಕೋಗಳಿ ೫೦೦ ಪ್ರದೇಶದ ಒಂದು ಪ್ರಮುಖ ಪಟ್ಟಣವಾಗಿದ್ದು, ಪ್ರಾಚೀನ ಕಾಲದಿಂದಲೂ ಸಾಂಸ್ಕೃತಿಕ ಕೇಂದ್ರವಾಗಿದೆ. ಈ ಗ್ರಾಮದ ಉತ್ತರ ದಿಕ್ಕಿನಲ್ಲಿರುವ ಮುಕ್ತಿರಾಮೇಶ್ವರ ದೇವಾಲಯದ ಒಳಭಾಗದಲ್ಲಿರುವ ಶಾಸನವೊಂದು ಈ ಪ್ರದೇಶವನ್ನು ವಿಶೇಷವಾಗಿ ವರ್ಣಿಸಿದೆ.

ನಾಡುಗಳೊಳಗೆಲ್ಲ ಗಾಡಿವೆತ್ತಸಮದ
ಸಾಡಗಳರಸನತಿ (ನತಿ) ಚೆಲ್ವ ಕೋಗಳಿ
ನಾಡು ನೋಡಲ್ಕೆ ಸೊರಗೆಯಿಕ್ಕುಂ ॥
ಆ ನಾಡೊಳೆಸೆವುದು ನಾನಾ ವಿದ್ವಜ್ಜನ

ಸ್ಥಾನಂ ನೀರ್ಗುಂದವೆನಿಪಗ್ರಹಾರವ

ತ್ಯಾನನ್ವಕಾರಿ ಜಗಕ್ಕೆಲ್ಲಂ ||[೨೯]

ಪ್ರಾಚೀನ ಕಾಲದಿಂದಲೂ ನೀಲಗುಂದವು ಪ್ರಕೃತಿ ಸೌಂದರ್ಯದಿಂದಲೂ ಸಿರಿ ಸಂಪತ್ತಿನಿಂದಲೂ ಪಶು ಪಕ್ಷಿಗಳಿಂದಲೂ ಶೋಭಿಸುವ ನಾಡಾಗಿತ್ತು. ಈ ನಾಡಿನಲ್ಲಿ ಧರ್ಮಶಾಸ್ತ್ರ ಕಲೆಗಳಲ್ಲಿ ನಿಪುಣರಾದ ವಿದ್ವಜ್ಜನರಿದ್ದರು. ಈ ನಾಡು ಸಂಮೃದ್ಧಿಯುಳ್ಳ ನಾಡಾಗಿತ್ತೆಂದು ಈ ಶಾಸನದ ಭಾಗದಿಂದ ತಿಳಿದುಬಂದಿದೆ.

## ಕಾವ್ಯದಲ್ಲಿ ನೀಲಗುಂದದ ವರ್ಣನೆ

ಕ್ರಿ.ಶ.೧೪೨೬ರಿಂದ ೧೪೪೬ವರೆಗೆ ಆಳಿದ ವಿಜಯನಗರ ಅರಸನಾದ ಪ್ರೌಢದೇವರಾಯನ ಆಳ್ವಿಕೆಯ ಕಾಲದಲ್ಲಿ ನೂರೊಂದು ವಿರಕ್ತ ಕವಿಗಳು ಇದ್ದರೆಂದು ತಿಳಿದುಬಂದಿದೆ. ಇವರು ಕೆಲವು ದಿನಗಳ ನಂತರ ದಕ್ಷಿಣ ಅಭಿಮುಖವಾಗಿ ಬಂದು ಕೊಟ್ಟೂರು, ನಾಯಕನಹಟ್ಟಿ, ಹರಪನಹಳ್ಳಿ, ಅರಸೀಕೇರೆ, ಕೂಲಹಳ್ಳಿ ಈ ಪ್ರದೇಶಗಳಲ್ಲಿ ನೆಲೆಸಿದರು. ಇವರ ಜೊತೆಯಲ್ಲಿ ಆಗಮಿಸಿದ ಸಿದ್ಧನಂಜೇಶನು ಹರಪನಹಳ್ಳಿ ಪಕ್ಕದಲ್ಲಿ ಬರುವ ಗುಡ್ಡದಲ್ಲಿ ಕೆಲವು ದಿನಗಳವರೆಗೆ ತಪಸ್ಸು ಮಾಡಿದನು. ನಂತರ ಬರೆದ ಕಾವ್ಯವಾದ "ಗುರುರಾಜ ಚರಿತ್ರ" ಎಂಬ ಗ್ರಂಥದಲ್ಲಿ ನೀಲಗುಂದದ ಬಗ್ಗೆ ವರ್ಣನೆ ಮಾಡಿರುವುದು ಕಂಡುಬರುತ್ತದೆ.

ಪೀಠಿಕಾ ಸಂಧಿಯಲ್ಲಿ ಬರುವ ೯ನೇ ನುಡಿಯಲ್ಲಿ ನೀಲಗುಂದದ ಉಲ್ಲೇಖ ಹೀಗಿದೆ.

ಶೈಲಜಾತೆಯ ಮುಡಿಯ ಕರಿಯಮೊಲ್ಲೆಯ ಪುಷ್ಪ

ಮಾಪಿ ಬೀಳಲು ನೀಲಗುಂದವೆಂದೆಂಬ ಪೆಸ

ರಾ ಲಲಿತಪುರ ವಿರಾಜಿಸಲಲ್ಲಿ ಭೀಮ ಶಿವನಂ ಭಜಿಸಿ ತನ್ನಪ್ಪವ

ಲೇಟೆಯಿಂ ಪಡೆದ ಸುಕ್ಷೇತ್ರ ಸಿಂಹಾಸನದ

ಮೇಲೆ ರಾರಾಜಿಪಂ ಪಂಚವಣ್ಣಿಗೆವರ್ಗ

ಲೋಲನ್ನದಾನೇಶ್ವರಂ ವೀರಮಾಹೇಶ್ವರಂ ಚಿತ್ ಪ್ರಕಾಶೇಶ್ವರಂ||[೩೦]

ಸಕಲ ಜ್ಞಾನಿಗಳೂ ವೀರ ಮಾಹೇಶ್ವರರೂ ಆದ ಶ್ರೀ ಅನ್ನದಾನೇಶ್ವರರು ನೀಲಗುಂದದ ಭೀಮೇಶ್ವರನನ್ನು ಪೂಜಿಸುತ್ತ ನೀಲಗುಂದದಲ್ಲಿ ಇದ್ದರೆಂದು ಈ ಪದ್ಯದ ಅರ್ಥವಾಗಿದೆ. ಪಾರ್ವತಿಯ ಜಡೆಯ ಹೂವು ಕೆಳಗೆ ಬಿದ್ದು, ಅದೇ ನೀಲಗುಂದವಾಯಿತೆಂದು ಈ ಪದ್ಯದಲ್ಲಿ ತಿಳಿಸಿದೆ.

ನೀಲಗುಂದ ಪರಿಸರದಲ್ಲಿ ಬರುವ ಶಾಸನಗಳನ್ನು ಅಧ್ಯಯನ ಮಾಡಿದಾಗ ನೀಲಗುಂದದ ಮುಕ್ತಿ ರಾಮೇಶ್ವರ ದೇವಾಲಯದಲ್ಲಿರುವ ಶಾಸನದಲ್ಲಿ ತ್ರಿಪದಿ ಉಲ್ಲೇಖವಾಗಿದೆ.

೧. ನಾಡುಗ| ಳೊಳಗೆಲ್ಲ| ಗಾಡೆವೆ| ತ್ತಸಮದ|

ನಾಡಗ| ಳರಸ| ನತಿಚೆಲ್ವ| ಕೋಗಳಿ|

ನಾಡುನೊ|ಗಕ್ಕಿ| ಸೊಗಯಿಕ್ಕುಂ|

೨.	ಆನಾಡೊ| ಳೆಸೆವುದು| ನಾನಾವಿ| ದ್ವಜ್ಜನ|		ತ್ರಿಪದಿ ಲಕ್ಷಣ :	ವಿ.ವಿ.ವಿ.ವಿ
ಸ್ಥಾನಂನೀ| ಗ್ರ್ಗಂದ| ವೆನಿಪಗ್ರ | ಹಾರವ		ವಿ.ಬ್ರ.ವಿ.ವಿ
ತ್ಯಾನಸ್ಥ| ಕಾರಿ| ಜಗಕೆಲ್ಲಂ|		ವಿ.ಬ್ರ.ವಿ.

ದೇವರಕೊಂಡಾರೆಡ್ಡಿ - ೧೯೯೮ ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ-೧, ಶಾಸನಸಂಖ್ಯೆ ೮೮ ಪುಟ ಸಂಖ್ಯೆ ೫೩೮, ಶಾಸನ ಸಾಲಿನ ಸಂಖ್ಯೆ ೧೦, ೧೧, ೧೨ ಪದ್ಯ

## ನೀಲಗುಂದ ಪರಿಸರದ ಶಾಸನ ಕವಿಗಳು

ಕನ್ನಡ ನಾಡಿನ ಶಾಸನ ಕವಿಗಳನ್ನು ಕುರಿತು ಹಲವಾರು ಬಿಡಿ ಲೇಖನಗಳು ಹಾಗೂ ಕೃತಿಗಳು ಹೊರಬಂದಿವೆಯಾದರೂ ಶಾಸನ ರೂವಾರಿಗಳ ಬಗ್ಗೆ ಲೇಖನಗಳು ಬಹಳ ವಿರಳ. ಶಾಸನ ಕವಿಗಳ ಬಗ್ಗೆ ಆರ್.ನರಸಿಂಹಾಚಾರ್ ಅವರ ಕನ್ನಡ ಶಾಸನ ಕವಿಗಳು ಮತ್ತು ಇತರ ಬಿಡಿ ಸಂಶೋಧನಾ ಲೇಖನಗಳು ಬಂದಿವೆ. ಅಲ್ಲದೆ ಡಾ.ಎಂ.ಎಂ.ಕಲಬುರ್ಗಿ, ಶ್ರೀನಿವಾಸ ರಿತ್ತಿ, ಎಸ್.ಗುರವ, ಆರ್.ಎಲ್. ಪಾಟೀಲ ಮುಂತಾದವರು ತಮ್ಮ ಲೇಖನಗಳಲ್ಲಿ ಶಾಸನ ರೂವಾರಿಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ.

ಸಾಮಾನ್ಯವಾಗಿ ಒಂದು ಶಿಲಾ ಶಾಸನ ರಚನೆಯಾಗಬೇಕಾದರೆ ಶಾಸನ ಪಾಠವನ್ನು ಕವಿಗಳು ರಚಿಸಿ ಅಥವಾ ಹೇಳುವರು. ಬರಹಗಾರರು ನಂತರ ಲಿಪಿಯನ್ನು ಬರೆದು ಸಿದ್ಧಪಡಿಸಿ ರೂವಾರಿಗಳಿಗೆ ಕೊಡುತ್ತಿದ್ದರು. ರೂವಾರಿಗಳು ಇದನ್ನು ಅದರ ಶಿಲೆಗಳ ಮೇಲೆ ಕೆತ್ತುತ್ತಿದ್ದರು. ಶಾಸನದ ಕೊನೆಯಲ್ಲಿ ತಮ್ಮ ಹೆಸರುಗಳನ್ನು ನಮೂದಿಸುತ್ತಿದ್ದರು.[೩೨]

ನೀಲಗುಂದ ಪರಿಸರದಲ್ಲಿ ಶಾಸನ ಕವಿ ಮತ್ತು ಬರಹಗಾರರನ್ನು ಉಲ್ಲೇಖಿಸಿರುವ ಮೊದಲ ಶಾಸನವೆಂದರೆ ಕ್ರಿ.ಶ.೨ನೇ ಶತಮಾನಕ್ಕೆ ಸೇರಿದ ಹಿರೇಹಡಗಲಿ ತಾಮ್ರಶಾಸನ. ಇದು ಕಂಚಿಪಲ್ಲವ ಶಿವಸ್ಕಂದವರ್ಮನ ಶಾಸನ. ಈ ಶಾಸನದ ಬರಹಗಾರ 'ಕೋಲಿವಾಲ ಬೋಜರಸ ಭಟ್ಟಶರ್ಮಾಪಸ್ತಲಿಖಿತೇನ ಪಟ್ಟಕಾದತ್ತ' ಎಂದು ಲಿಪಿಕಾರನ ಹೆಸರಿನ ಉಲ್ಲೇಖವಿದೆ.

ನೀಲಗುಂದ ಪರಿಸರದ ಮೊದಲ ಶಾಸನ ಕವಿ "ಕಾಶ್ಮೀರ ಭಟ್ಟನಾಗಿದ್ದಾನೆ."[೩೩]
ಕೋಗಳಿ ಶಾಸನ ರೂವಾರಿ ಕಾಯಿಕೋಜ
ಬಾಗುಳಿ ಶಾಸನ ರೂವಾರಿ ಚಿಟೋಜಂ
ಹಿರೇಮ್ಯಾಗೇರಿ ಶಾಸರೂವಾರಿ ಶ್ರೀಕವಿಮುಖ ದರ್ಪಣಂ
ಉಚ್ಚಂಗಿದುರ್ಗ ಶಾಸನಮಾ ಬರೆದಂ ಸೇನಭೊವ
ನಂದಿಬೇವೂರು ವಾವಣಯ್ಯ ಬರೆದ
ಹೊಳಲು ದೇವನ್ನನ ಬರಹ

## ನೀಲಗುಂದ ಪರಿಸರದಲ್ಲಿ ರಾಜರ ಪ್ರಶಸ್ತಿ ಹಾಗೂ ಬಿರುದುಗಳ ಉಲ್ಲೇಖ

**ಶಾಸನ ಸ್ಥಳ : ನೀಲಗುಂದ, ಭೀಮೇಶ್ವರ ದೇವಾಲಯದ ಆವರಣ**

**ಅರಸ : ಚಾಲುಕ್ಯರಾಜ ತ್ರಿಭುವನ ಮಲ್ಲದೇವ**

**ಪ್ರಶಸ್ತಿ :** ಮಹಾಸಾಮನ್ತಾದಿ ಪತಿಯೂ ಮಹಾಪ್ರಚಂಡ ದಂಡನಾಯಕನೂ ವಿದ್ವಾಂಸರಿಗೆ ವರವನ್ನು ನೀಡುವವನೂ ಸಜ್ಜನರನ್ನು ಪ್ರಸನ್ನಗೊಳಿಸುವವನೂ ಗೋತ್ರವನ್ನು ಪವಿತ್ರಗೊಳಿಸಿದವನೂ ಪರಸ್ತ್ರೀಯರಿಗೆ ಪುತ್ರನಂತಿರುವವನೂ ವೈರಿಗಳಿಗೆ ಯಮನೂ ಸಾಹಸೋತ್ತುಂಗನೂ ಸಿಂಗನಾಯಕ ಎಂಬ ಪ್ರಶಸ್ತಿಗಳು ರಾಜನಿಗಿದೆ.[೩೪]

## ವೀರಪಾಂಡ್ಯದೇವ

ಮಹಾಮಂಡಲೇಶ್ವರಮ ಐದು ಬಿರುದುಗಳನ್ನು ಹೊಂದಿರುವವನೆಂದು ಹೇಳಲಾಗಿದೆ. ಕಾಳಂಜಪುರದ ಅಧೀಶ್ವರನೂ ಬಂಗಾರ ವೃಷಭ ಧ್ವಜ ಉಳ್ಳವನು. ಡಮರುಗ ನಗಾರಿ ಮೊದಲಾದವುಗಳ ಘೋಷ ಉಳ್ಳವನು ಕಳಚೂರಿ ಕುಲ ಎಂಬ ಕಮಲವನ್ನುರಳಿಸುವ ಸೂರ್ಯನು ಕದನ ಪ್ರಚಂಡನು ವಜ್ರ ಪಂಜರನು ಪ್ರತಾಪದಲ್ಲಿ ಲಂಕೇಶ್ವರನಂತಿರುವವನೂ ಪರನಾರೀ ಸಹೋದರನೂ ಛಲದಲ್ಲಿ ರಾಮನಂತಿರುವವನೂ ಶತ್ರುಗಳೆಂಬ ಆನೆಗಳಿಗೆ ಕಂಠೀರವನೂ ಶನಿವಾರ ಸಿದ್ದಿಯೂ ಗಿರಿದುರ್ಗಮಲ್ಲನೂ ಮೊದಲಾದ ಪ್ರಶಸ್ತಿಗಳನ್ನು ಹೊಂದಿದವನೆಂದು ಶಾಸನ ಉಲ್ಲೇಖಿಸುತ್ತದೆ.[೩೫]

## ಚಾಲುಕ್ಯರ ತ್ರಿಭುವನಮಲ್ಲ ದೇವ ವಿಕ್ರಮಾದಿತ್ಯ

ಸಮಸ್ತ ಭುವನಾಶ್ರಯನೂ ಶ್ರೀ ಪೃಥ್ವಿ ವಲ್ಲಭನೂ ಮಹಾರಾಜಾಧಿರಾಜನೂ ಪರಮೇಶ್ವರನೂ ಪರಮ ಭಟ್ಟಾರಕನೂ ಸತ್ಯಾಶ್ರಯ ಕುಲತಿಲಕನೂ ಚಾಲುಕ್ಯಾಭರಣನೂ ಶ್ರೀಮತ್ರಿಭುವನ ಮಲ್ಲಿದೇವರ ಪಾದ ಪದ್ಮೋಪಜೀವಿಯೂ ಪಂಚ ಮಹಾಶಬ್ದಗಳನ್ನು ಹೊಂದಿರುವವನೂ ಮಹಾಮಂಡಲೇಶ್ವರನೂ ಕಾಂಚಿಪುರ ವರಾಧೀಶ್ವರನೂ ಯದುವಂಶವೆಂಬ ಆಕಾಶಕ್ಕೆ ಸೂರ್ಯನೂ ಒಳ್ಳೆಯ ಭವರಿಗೆ ಚೂಡಾಮಣಿಯೂ ತಮ್ಮ ಕುಲವೆಂಬ ಕಮಲವನ್ನರಳಿಸುವ ಸೂರ್ಯನೂ ಜೋಳರ ಮನಸ್ಸನ್ನು ಭಂಗ ಗೊಳಿಸುವವನೂ ಶ್ರೀಮತ್ ತ್ರಿಭುವನ ಮಲ್ಲನ ಪಾದಾರವಿಂದಗಳಲ್ಲಿ ದುಂಬಿಯಂತಿರುವವನೂ ಆದ ಶ್ರೀಮತ್ ತ್ರಿಭುವನ ಮಲ್ಲರಾಯರಾಜ ಈ ರೀತಿಯಾಗಿ ಶಾಸನದಲ್ಲಿ ವರ್ಣಿತವಾಗಿದೆ.[೩೬]

## ಹಲುವಾಗಲು ಕಲ್ಲೇಶ್ವರ ದೇವಾಲಯದ ಶಾಸನ

ಈ ಶಾಸನವು ಯಾದವರ ದೊರೆ ರಾಮಚಂದ್ರನ ಅವಧಿಯ ಶಾಸನವಾಗಿದೆ. ಪೃಥ್ವಿವಲ್ಲಭ ಮಹಾರಾಜಾಧಿರಾಜ ಪರಮೇಶ್ವರ, ಪರಮಭಟ್ಟಾರಕನೂ ದ್ವಾರಾವತೀಪುರವರಾಧೀಶ್ವರನೂ ವಿಷ್ಣುವಂಶೋದ್ಭವನೂ, ಚಿನ್ನದ ಗರುಡ ಧ್ವಜ ಉಳ್ಳವನೂ, ಯಾದವ ಕುಲವೆಂಬ ಕಮಲವನ್ನು ಅರಳಿಸುವ ಸೂರ್ಯನೂ, ಶತ್ರುರಾಜರಿಗೆ ಆನೆಯಂತಿರುವವನೂ, ಮಾಳವರಾಜರೆಂಬ ಮನ್ಮಥರಿಗೆ

ತ್ರಿನೇತ್ರನಂತಿರುವವನೂ, ಗುರ್ಜರ ರಾಜರೆಂಬ ಆನೆಗೆ ಅಂಕುಶದಂತಿರುವವನೂ, ತೆಲುಗು ರಾಜರ ಶಿರಸ್ಸಿನಲ್ಲಿರುವ ಕಮಲದ ಕಾಂಡವನ್ನು ಮುರಿದು ಹಾಕುವವನೂ, ಕರಘನ ಸ್ಥಾಪನಾಚಾರ್ಯನೂ, ರಣರಂಗಧೀರನೂ ತುರುಷ್ಕರ ಉಪದ್ರವಗಳಿಂದ ಸಮಸ್ತ ಭೂಮಿಯನ್ನು ಉದ್ಧರಿಸಿದವರಲ್ಲಿ ಅಗ್ರಗಣ್ಯನೂ, ಹೊಯಿಸಣ(ಹೊಯ್ಸಳ) ರಾಜರ ಸಾಮ್ರಾಜ್ಯ ಲಕ್ಷ್ಮಿಯನ್ನಪಹರಿಸಿದವನೂ ಇತ್ಯಾದಿ ಬಿರುದುಗಳಿಂದ ಅಲಂಕೃತನಾದ ಶ್ರೀಮತ್ ಪ್ರೌಢ ಪ್ರತಾಪ ಚಕ್ರವರ್ತಿ ಶ್ರೀರಾಮ ಚಂದ್ರರಾಯ ಶಾಸನ ಉಲ್ಲೇಖವಾಗಿದೆ.[೩೭]

## ಕಲ್ಲೇಶ್ವರ ಶಾಸನ

ನೊಳಂಬವಾಡಿ ನಾಡನ್ನು ಆಳುತ್ತಿದ್ದ ತ್ರಿಭುವನ ಮಲ್ಲಪಾಂಡ್ಯದೇವ ಹಾಗೂ ಮಹಾನಾಡ ಪ್ರಭು ಯಿರುಂಗಸನ ಉಲ್ಲೇಖ.

ಭೂಮಿಗೆಲ್ಲಾ ಆಶ್ರಯನೂ ಪೃಥ್ವಿವಲ್ಲಭನೂ ಮಹಾರಾಜಾಧಿರಾಜ ಪರಮೇಶ್ವರನೂ ಪರಮ ಭಟ್ಟಾರಕನೂ ಸತ್ಯಾಶ್ರಯ ಕುಲತಿಲಕನೂ ಚಾಳುಕ್ಯಾಭರಣನೂ ಆದ ಶ್ರೀಮತ್ ತ್ರಿಭುವನ ಮಲ್ಲದೇವರ ವಿಜಯರಾಜ್ಯವು ಉತ್ತರೋತ್ತರವಾಗಿ ಅಭಿವೃದ್ಧಿ ಹೊಂದುತ್ತಿರಲು ಮಹಾಮಂಡಲೇಶ್ವರನೂ ಕಾಂಚೀ ಪುರಾಧೀಶ್ವರನೂ ಆ ವಂಶವೆಂಬ ಆಕಾಶಕ್ಕೆ ಸೂರ್ಯನಂತಿರುವವನೂ ತನ್ನ ವಂಶವೆಂಬ ಕಮಲವನ್ನರಳಿಸುವ ಸೂರ್ಯನೂ ಎಂದು ವರ್ಣನೆಯ ಉಲ್ಲೇಖವಾಗಿದೆ.[೩೮]

## ೩.೪. ಅಗ್ರಹಾರ

ಪ್ರಾಚೀನ ಕರ್ನಾಟಕ ವಿದ್ಯಾಭ್ಯಾಸದಲ್ಲಿ ಕಂಡುಬರುವ ಒಂದು ಪ್ರಮುಖ ಅಂಶವೆಂದರೆ ಅಗ್ರಹಾರಗಳು ಇವು ಊರೂರುಗಳಲ್ಲಿ (ಹಳ್ಳಿ, ಹಳ್ಳಿಗಳಲ್ಲಿ) ನಿರ್ಮಾಣಗೊಂಡವು. ಅಗ್ರಹಾರ ಎಂಬ ಪದದಲ್ಲಿ ಎರಡು ಅರ್ಥಗಳು ಅಡಗಿವೆ. ಅಗ್ರಹಾರ - ಅಗ್ರ-ಶ್ರೇಷ್ಠ(ಉನ್ನತ) ಆಹಾರ ಎಂದರೆ ಸ್ಥಳ, ಪದಾರ್ಥ ಎಂದು ಗುರುತಿಸುವುದಾದರೆ ಅದು ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ, ಊರು ಅಥವಾ ವಸ್ತು ಪದಾರ್ಥವೆಂದು ಪರಿಗಣಿಸಬಹುದು. ಅಂದರೆ ಇಲ್ಲಿ ಶ್ರೇಷ್ಠರೆಂದರೆ ಚತುರ್ವರ್ಣದಲ್ಲಿ ಅಗ್ರರಾದ ಬ್ರಾಹ್ಮಣರೆನ್ನಲಾಗಿದೆ.[೩೯] ಅದ್ದರಿಂದ ಅವರಿಗೆ ದತ್ತಿಯಾಗಿ ಬಿಟ್ಟುಕೊಟ್ಟ ಊರುಗಳೇ ಅಗ್ರಹಾರಗಳು. ಈ ದತ್ತಿಗಳನ್ನು ಸಾಮಾನ್ಯವಾಗಿ ಬ್ರಾಹ್ಮಣರಿಗೆ ಬಿಟ್ಟುಕೊಡಲಾಗುತ್ತಿದ್ದರೂ ಕೆಲವು ಸಂದರ್ಭಗಳಲ್ಲಿ ಬ್ರಾಹ್ಮಣರೇತರರಿಗೂ ಬಿಟ್ಟುಕೊಟ್ಟಿರುವ ಉದಾಹರಣೆಗಳು ಇದೆ. ಅಂದರೆ ನೀಲಗುಂದವು ಒಂದು ಭತ್ತ ಗ್ರಾಮವಾಗಿ ೫೦೦ ಬ್ರಾಹ್ಮಣರಿಗೆ ದತ್ತಿ ಬಿಟ್ಟ ಅಗ್ರಹಾರವಾಗಿದೆ. ಇಲ್ಲಿನ ಶಾಸನಗಳಲ್ಲಿ ಶ್ರೀಮದಗ್ರಹಾರಂ,[೪೦] ಶ್ರೀ ಮನ್ಮಹಾಗ್ರಹಾರಂ,[೪೧] ಅನಾದಿ ಅಗ್ರಹಾರ[೪೨], ಅಗ್ರಹಾರಕ್ಕೆ ಈ ರೀತಿಯ ಉಲ್ಲೇಖವಿದೆ.

ಸಾಂಕೇತಿ ಬ್ರಾಹ್ಮಣರ ವಲಸೆಯಕಾಲ[೪೩] ಲೇಖನದಲ್ಲಿ ನೀಲಗುಂದದ ಅಗ್ರಹಾರದಲ್ಲಿ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ತಮಿಳು ನಾಡಿನಿಂದ ೩೦೦ ಜನ ಬ್ರಾಹ್ಮಣರ ಗುಂಪು ನೀಲಗುಂದ

ಅಗ್ರಹಾರಕ್ಕೆ ಬಂದಿರುವರು ಎಂದು ಉಲ್ಲೇಖವಾಗಿದೆ. ಹಿಂದೆ ಅಗ್ರಹಾರದಲ್ಲಿ ೨೦೦ ಮತ್ತು ೩೦೦ ಒಟ್ಟು ೫೦೦ ಬ್ರಾಹ್ಮಣರು ನೆಲೆಸಿರಬಹುದು. ಈ ಬ್ರಾಹ್ಮಣರಿಗೆ ನೀಲಗುಂದ, ಕೃಷ್ಣಪಲ್ಲಿಕಾ ಗ್ರಾಮಗಳನ್ನು ದತ್ತಿ-ನೀಡಿದ ಉಲ್ಲೇಖವಿದೆ.[೪೪] ಈ ಆಧಾರದಿಂದ ನೀಲಗುಂದವು ಕ್ರಿ.ಶ.೧೦೭೯ಕ್ಕಿಂತ ಮೊದಲೇ ಅಗ್ರಹಾರವಾಗಿರಬಹುದೆಂದು ಊಹಿಸಲಾಗಿದೆ.

ನೀಲಗುಂದ ಅಗ್ರಹಾರಗಳಲ್ಲಿ ಎಲ್ಲ ಚಟುವಟಿಕೆಗಳು ಸಾಮಾನ್ಯವಾಗಿ ಮಹಾಜನರ ಸಮ್ಮುಖದಲ್ಲಿ ನಡೆಯುತ್ತಿದ್ದವು. ಇವರು ಅಗ್ರಹಾರದ ಒಡೆಯರಾಗಿ ಯಾವುದೇ ಕುಂದುಕೊರತೆಗಳು ಬಾರದಂತೆ ದಾನ-ಧರ್ಮಗಳನ್ನು ನೀಡುವಲ್ಲಿ ಎಚ್ಚರಿಕೆ ವಹಿಸಿಕೊಳ್ಳುತ್ತಿದ್ದರು. ಊರಿನ ಯಾವ ವ್ಯಕ್ತಿಯಾಗಲಿ ಇತರ ದಾನ ಧರ್ಮಗಳನ್ನು ಬಿಡಬೇಕಾದಲ್ಲಿ ಈ ಮಹಾಜನರ ಅನುಮತಿಯನ್ನು ಪಡೆಯಬೇಕಾಗಿತ್ತು. ದಾನ ಸ್ವೀಕರಿಸುವಾಗ ಅದರ ಬಳಕೆಯೊಂದಿಗೆ ಅವುಗಳ ಪ್ರತಿಪಾದನೆಯೂ ಮಹಾಜನರ ಮುಖ್ಯ ಕರ್ತವ್ಯವಾಗಿತ್ತು ಎಂದು ಇಲ್ಲಿಯ ಕೆಲವು ಶಾಸನಗಳಲ್ಲಿ ಉಲ್ಲೇಖವಾಗಿದೆ.

## ೩.೫. ಮಹಾಜನರು

ಮಹಾಜನರು ಅಂದಿನ ಸಮಾಜದಲ್ಲಿ ಅಗ್ರಸ್ಥಾನ ಪಡೆದಿದ್ದರು ಎಂದು ನೀಲಗುಂದ ಪರಿಸರದಲ್ಲಿ ಬರುವ ಶಾಸನಗಳಲ್ಲಿ ಕಂಡುಬರುತ್ತವೆ. ಇವರು ಪ್ರತಿಯೊಂದು ಕಾರ್ಯಗಳ ಮುಂದಾಳತ್ವವನ್ನು ವಹಿಸುತ್ತಿದ್ದರು. ಯೋಗವನ್ನು ಮಾಡಿಸುವುದು, ಓದುವುದು, ಓದಿಸುವುದು, ದಾನ ನೀಡುವುದು, ಸ್ವೀಕರಿಸುವುದು ಇವರ ಕೆಲಸಗಳಾಗಿದ್ದವು.[೪೫] ಇವುಗಳ ಜೊತೆಗೆ ಬೇರೆ ಬೇರೆ ಜವಾಬ್ದಾರಿಯನ್ನು ವಹಿಸಿಕೊಂಡಿದ್ದರೆಂದು ತಿಳಿಯುತ್ತದೆ. ದೇವಾಲಯಗಳಿಗೆ ನೀಡಿದ ದಾನ ಸರಿಯಾಗಿ ನಿರ್ವಹಣೆಯಾಗುವಂತೆ ನೋಡಿಕೊಳ್ಳುವುದು ದೇವಾಲಯದಲ್ಲಿ ನಡೆಯುವ ಆಚರಣೆಗಳನ್ನು ಗಮನಿಸುವುದು, ಆಚರಣೆಯು ತಪ್ಪಿದಾಗ ಅವರನ್ನು ಸ್ಥಾನದಿಂದ ಚ್ಯುತಿಗೊಳಿಸಿ ಬೇರೆಯವರನ್ನು ನೇಮಿಸುವುದು, ಕೆರೆಗಳನ್ನು ಕಟ್ಟಿಸುವುದು, ಹಾಗೂ ಅವುಗಳ ಜೀರ್ಣೋದ್ಧಾರ ಮಾಡಿಸುವುದು ಮಹಾಜನರ ಕೆಲಸವಾಗಿತ್ತು.

ಮಹಾಜನರನ್ನು ನೀಲಗುಂದದಲ್ಲಿ ಬರುವ ಅಲನೇ[೪೬] ಶಾಸನದಲ್ಲಿ ಈ ರೀತಿಯಲ್ಲಿ ವರ್ಣಿಸಿದ್ದಾರೆ. ಆ ಗ್ರಾಮದ ಮಹಾಜನಗಳು ಯಮ, ನಿಯಮ, ಸ್ವಾಧ್ಯಾಯ, ಧ್ಯಾನ, ಧಾರಣ, ಮೌನ, ಅನುಷ್ಠಾನ, ಜಪ, ಸಮಾಧಿ, ಶೀಲಗುಣ ಸಂಪನ್ನರೂ, ಸಜ್ಜನರೂ, ನಾಲ್ಕು ಸಮುದ್ರಗಳಿಂದ ಸುತ್ತವರಿದ, ಭೂಮಿಯಲ್ಲೆಲ್ಲಾ ಪ್ರಸಿದ್ಧರೂ, ದ್ವಿಜ ವಂಶದಲ್ಲೇ ಪ್ರಸಿದ್ಧರೂ ಮೀಮಾಂಸವೆಂಬ ಸರೋವರದಲ್ಲಿ ವಿಹರಿಸುವ ರಾಜ ಹಂಸರೂ ಚತುರ್ವೇದ, ವೇದಾಂಗ, ಹದಿನೆಂಟು ಪುರಾಣಗಳು, ಸ್ಮೃತಿಗಳು ಇನ್ನೂ ಅನೇಕ ಶಾಸ್ತ್ರ ಸಾಹಿತ್ಯಗಳಲ್ಲಿ ಪಾರಂಗತರೂ ಪಂಚ ಮಹಾಯಜ್ಞಗಳ ಕಾರ್ಯದಲ್ಲಿ ನಿರತರೂ ಆರು ಕರ್ಮದಲ್ಲಿ ನಿರತರೂ ಏಳು ಸೋಮ ಸಂಸ್ಥಾನಗಳ ಅವಭೃತ ಸ್ನಾನಗಳಿಂದ ಪವಿತ್ರಗೊಳಿಸಲ್ಪಟ್ಟ ಶರೀರ ಉಳ್ಳವರೂ, ಅಷ್ಟಾಂಗ ಯೋಗದ ಪ್ರಯೋಗವನ್ನು ಬಲ್ಲವರೂ, ಒಂಭತ್ತು ಸೂತ್ರಗಳಿಂದ

ವಿರಾಜಮಾನವಾದ ವಕ್ಷಸ್ಥಳ ಉಳ್ಳವರು, ಹತ್ತು ದಿಕ್ಕುಗಳನ್ನು ಬೆಳಗಿಸುವಂತಹ ಯಶಸ್ಸುಳ್ಳವರೂ, ಹದಿನಾಲ್ಕು ವಿದ್ಯೆಗಳಲ್ಲಿ ಪಾರಂಗತರೂ, ೩೨೦೦೦ ವಿಷಯ(ಪ್ರದೇಶ)ಗಳಲ್ಲಿ ಅಗ್ರಗಣ್ಯರು, ಅನವರತವಾಗಿ ಪುಣ್ಯವನ್ನು ಸಂಪಾದಿಸಿದವರೂ ಇತ್ಯಾದಿ ಪ್ರಶಸ್ತಿಗಳನ್ನು ಪಡೆದವರು ಬ್ರಾಹ್ಮಣರಾಗಿದ್ದುದನ್ನು ಶಾಸನಗಳಲ್ಲಿ ಕಾಣಬಹುದಾಗಿದೆ.

ಮಹಾಜನರು ಪಂಡಿತರು, ಶಾಸ್ತ್ರಜ್ಞ, ಪರಿಜ್ಞಾನಿಗಳಾಗಿರುವುದರಿಂದ ಅವರಿಗೆ ಅಪಾರವಾದ ಗೌರವವು ಇತ್ತು. ಈ ಮೂಲಕ ಅವರು ಎಲ್ಲ ಕ್ಷೇತ್ರಗಳಲ್ಲಿಯೂ ಅಗ್ರಮಾನ್ಯರಾಗಿದ್ದರು. ಅದಕ್ಕಾಗಿ ಇವರಿಗೆ ಅರಸರು, ಅಧಿಕಾರಿಗಳು ಮತ್ತು ಇತರೆ ಜನರು, ಅನೇಕ ದಾನ-ದತ್ತಿಗಳನ್ನು ನೀಡಿರುವುದು ತಿಳಿದುಬರುತ್ತದೆ.

**ಅಡಿಟಿಪ್ಪಣಿಗಳು**

೧. ಗಿರಿಜ ಟಿ., ೨೦೦೩, ಸಂಡೂರು ಪರಿಸರದ ಶಾಸನೋಕ್ತ ದೇವಾಲಯಗಳು, ಪು.೫೫

೨. ಅದೇ, ಪು.೫೫

೩. ದೇವರಕೊಂಡಾರೆಡ್ಡಿ, ೧೯೯೮ ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ ೧, ಪು.೫೧೯

೪. ಅದೇ, ಪು.೫೩೭

೫. ಅದೇ, ಪು.೫೨೯

೬. ಅದೇ, ಪು.೫೩೦

೭. ಅದೇ, ಪು.೫೩೨ ೫೩೩

೮. ಅದೇ, ಪು.೫೩೩

೯. ಅದೇ, ಪು.೫೩೪

೧೦. ಅದೇ, ಪು.೫೨೩

೧೧. ಅದೇ, ಪು.೫೨೭

೧೨. ಅದೇ, ಪು.೫೧೯

೧೩. ಅದೇ, ಪು.೫೨೧

೧೪. ಅದೇ, ಪು.೫೩೫

೧೫. ಅದೇ, ಪು.೫೪೦ ೫೪೫

೧೬. ಅದೇ, ಪು.೫೧೦-೫೧೧

೧೭. ಶೇಷಶಾಸ್ತ್ರಿ ಆರ್., ೧೯೮೨, ಕರ್ನಾಟಕದ ವೀರಗಲ್ಲುಗಳು, ಪು.೧೧

೧೮. ಅದೇ, ಪು.೧೧

೧೯. ಅದೇ, ಪು.೨೦

೨೦. ಕುರುಬ ಜನಾಂಗದವರು ಮದುವೆಯಾಗದೆ ಸತ್ತ ಯುವಕರನ್ನು ವೀರನೆಂದು ಕರೆಯುತ್ತಾರೆ.

೨೧. ಶೇಷಶಾಸ್ತ್ರಿ, ೧೯೮೨, ಪೂರ್ವೋಕ್ತ, ಪು.೨೦

೨೨. ಹಿರೇಮಠ ಎಸ್., ೧೯೯೮, ಶಾಸನಾಧ್ಯಯನ, ಪು.೪೬

೨೩. ಚಿದಾನಂದಮೂರ್ತಿ ಎಂ., ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೩೩೦

೨೪. ಶೇಷಶಾಸ್ತ್ರಿ, ೧೯೮೨, ಪೂರ್ವೋಕ್ತ, ಪು.೨೮

೨೫. ಅದೇ, ಪು.೩೫

೨೬. ಅದೇ, ಪು.೭೧

೨೭. ಅದೇ, ಪು.೮೫

೨೮. ಅದೇ, ಪು.೮೫

೨೯. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪು.೮೫

೩೦. ಸಿದ್ದನಂಜೇಶನ, ೧೯೫೦, ಗುರುರಾಜ ಚರಿತ್ರೆ, ಪು.೩

೩೧. ದೇವರಕೊಂಡಾರೆಡ್ಡಿ, ೧೯೯೮, ಪೂರ್ವೋಕ್ತ, ಪು.೫೩೮

೩೨. ನಾಗಭೂಷಣ ಎಸ್.ಎಂ., ೨೦೦೩, ಬಳ್ಳಾರಿ ಜಿಲ್ಲೆಯ ಶಾಸನಗಳ ರೂವಾರಿಗಳು, ಕರ್ನಾಟಕ ಇತಿಹಾಸದರ್ಶನ, ಸಂಪುಟ.೧೮, ಪು.೧೨೧-೧೨೨

೩೩. ಅದೇ, ಪು.೧೨೧ ೧೨೨

೩೪. ದೇವರಕೊಂಡಾರೆಡ್ಡಿ, ಪೂರ್ವೋಕ್ತ, ಪು.೫೩೦

೩೫. ಅದೇ, ಪು.೫೩೧

೩೬. ಅದೇ, ಪು.೫೩೮

೩೭. ಅದೇ, ಪು.೫೧೯ ೫೨೦

೩೮. ಅದೇ, ಪು.೫೨೮

೩೯. ಚಿದಾನಂದಮೂರ್ತಿ ಎಂ., ೨೦೦೨, ಪೂರ್ವೋಕ್ತ, ಪು.೨೩೦

೪೦. ದೇವರಕೊಂಡಾರೆಡ್ಡಿ, ೧೯೯೮, ಪುರ್ವೋಕ್ತ, ಪು.೫೩೦

೪೧. ಅದೇ, ಪು.೫೩೨

೪೨. ಅದೇ, ಪು.೫೩೫

೪೩. ಸುಧಾಮಣಿ ಎಂ., ೨೦೦೧, ಸಂಕೇತಿ ಬ್ರಾಹ್ಮಣರ ವಲಸೆಯ ಕಾಲ, ಕರ್ನಾಟಕ ಇತಿಹಾಸ ದರ್ಶನ, ಸಂ.೧೬, ಪು.೨೬೬-೨೬೭

೪೪. ದೇವರಕೊಂಡಾರೆಡ್ಡಿ, ೧೯೯೮, ಪುರ್ವೋಕ್ತ, ಪು.೫೪೪

೪೫. ಅದೇ, ಪು.೫೩೮

# ಅಧ್ಯಾಯ ೪

## ನೀಲಗುಂದ ಪರಿಸರದ ಪ್ರಮುಖ ದೇವಾಲಯಗಳು

೪.೧. ದೇವಾಲಯಗಳು

೪.೨. ಮೂರ್ತಿಶಿಲ್ಪ

೪.೩. ಮಠ

೪

# ನೀಲಗುಂದ ಪರಿಸರದ ಪ್ರಮುಖ ದೇವಾಲಯಗಳು

ಒಂದು ದೇಶದ ಸಾಂಸ್ಕೃತಿಕ ಸಂಪತ್ತು ಎನಿಸಿಕೊಂಡಿರುವ ದೇವಾಲಯಗಳು ಈ ದೇಶದ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಈ ನಿಟ್ಟಿನಲ್ಲಿ ಭಾರತವು ಪ್ರಾಚೀನ ಕಾಲದಿಂದಲೂ ಭವ್ಯ ಪರಂಪರೆಯನ್ನು ಹೊಂದಿದ ದೇಶವಾಗಿದೆ.[೧] ಭಾರತದಲ್ಲಿ ಆರ್ಥಿಕ ಸಂಪತ್ತು ಮಾತ್ರ ದೇಶದ ಸಂಪತ್ತಾಗಿರದೇ, ಸಾಹಿತ್ಯ, ಧರ್ಮ, ಕಲೆ ಮತ್ತು ವಾಸ್ತುಶಿಲ್ಪಗಳು ಇದರ ವೈವಿಧ್ಯಪೂರ್ಣ ಬೆಳವಣಿಗೆಯೊಂದಿಗೆ ತನ್ನದೇ ಆದ ಸಂಸ್ಕೃತಿಯನ್ನು ಪಡೆದು ವಿಶಿಷ್ಟಪೂರ್ಣವಾದ ಸ್ಥಾನವನ್ನು ಇಂದಿಗೂ ಉಳಿಸಿಕೊಂಡಿದೆ.[೨]

ಧಾರ್ಮಿಕ ಕಲ್ಪನೆಗಳನ್ನು, ದೈವತ್ವದಲ್ಲಿ ನಂಬಿಕೆಯನ್ನು ಹೊಂದಿದ ಭಾರತೀಯರು ದೇಶದ ತುಂಬೆಲ್ಲ ವೈವಿಧ್ಯಮಯವಾದ ದೇವಾಲಯಗಳನ್ನು ನಿರ್ಮಾಣ ಮಾಡಿದ್ದಾರೆ. ಬಹುಶಃ ಜಗತ್ತಿನ ಯಾವುದೇ ಭಾಗದಲ್ಲಿ ಕಂಡುಬರದೇ ಇರುವ ಅಧಿಕ ಸಂಖ್ಯೆಯ ದೇವಾಲಯಗಳು ಭಾರತದಲ್ಲಿವೆ. ಈ ದೇವಾಲಯಗಳು ಪ್ರಾಚೀನ ಕಾಲದ ಧಾರ್ಮಿಕ ಸಾಂಸ್ಕೃತಿಕ ಅಭಿವೃದ್ಧಿಗಾಗಿ ರಾಜರು ನೀಡಿರುವ ಪ್ರೋತ್ಸಾಹವನ್ನು, ರೂವಾರಿಗಳ ಕೈಚಳಕ ಮತ್ತು ಕಲಾ ನೈಪುಣ್ಯತೆಯ ಮಹಿಮೆಯನ್ನು ಇಂದಿನ ಜನತೆಗೆ ಸಾರಿ ಹೇಳುವ ಜೀವಂತ ಸಾಕ್ಷಿಯಾಗಿವೆ. ಅಲ್ಲದೆ ಕಲಾ ಕ್ಷೇತ್ರಕ್ಕೆ ನೀಡಿದ ಮಹಾನ್ ಕೊಡುಗೆಗಳಾಗಿವೆ.[೩]

ಕರ್ನಾಟಕದಲ್ಲಿ ಕಲಾಸಿರಿಯ ಸಮಗ್ರ ಪದ್ಧತಿ ಹಾಗೂ ಶೈಲಿಯನ್ನು ತನ್ನಲ್ಲಿ ಹುದುಗಿಸಿಕೊಂಡಿರುವ ಸ್ಥಳಗಳಲ್ಲಿ ಹರಪನಹಳ್ಳಿ ತಾಲ್ಲೂಕಿನ 'ನೀಲಗುಂದ' ಪರಿಸರವು ಒಂದಾಗಿದೆ.

ನೀಲಗುಂದ ಪರಿಸರದಲ್ಲಿ ಬರುವ ಹಲವು ದೇವಾಲಯಗಳ ಕಲೆ ಹಾಗೂ ತಳವಿನ್ಯಾಸವು ಅವು ಬಹುತೇಕವಾಗಿ ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರ ಮತ್ತು ಯಾದವ ಕಾಲದಲ್ಲಿ ನಿರ್ಮಾಣವಾಗಿದೆಯೆಂದು ತಿಳಿಸುತ್ತವೆ. ಈ ಪರಿಸರದಲ್ಲಿ ಹಲವಾರು ದೇವಾಲಯಗಳು ನಿರ್ಮಾಣ ಮತ್ತು ಜೀರ್ಣೋದ್ಧಾರವು ಇತರ ಅರಸರ ಆಳ್ವಿಕೆಯಲ್ಲಿ ನಡೆದಿವೆ. ಇಲ್ಲಿನ ಎಲ್ಲ ದೇವಾಲಯಗಳಿಗೆ ಅರಸರು, ಸಾಮಂತರು, ವರ್ತಕರು, ವ್ಯಾಪಾರಿಗಳು, ಸಾಮಾನ್ಯರು ಅವುಗಳ ಅಂಗಭೋಗ ರಂಗಭೋಗ, ಜೀರ್ಣೋದ್ಧಾರಕ್ಕೆ ಉದಾರವಾಗಿ ದಾನ ನೀಡಿರುವುದು ಶಾಸನಗಳ ಮೂಲದಿಂದ ಕಂಡುಬರುತ್ತವೆ.

## ೪.೧. ದೇವಾಲಯಗಳು

ಈ ಭಾಗದಲ್ಲಿ ಕಂಡುಬರುವ ದೇವಾಲಯಗಳನ್ನು ಅವುಗಳ ಶಿಲ್ಪಶೈಲಿ, ಇತಿಹಾಸ ಮತ್ತು ಅಲ್ಲಿ ದೊರೆಯುವ ಶಾಸನಗಳ ಆಧಾರದಿಂದ ಗುಂಪುಗಳನ್ನಾಗಿ ವರ್ಗೀಕರಿಸಿ ಕ್ರಮವಾಗಿ ಅಧ್ಯಯನಕ್ಕೊಳಪಡಿಸಲು ಈ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ.

**ಗ್ರಾಮ :** ನೀಲಗುಂದ

**ಶೈಲಿ :** ವೇಸರ ಶೈಲಿ

**ಸ್ಥಳ :** ನೀಲಗುಂದ ಗ್ರಾಮದ ಉತ್ತರಕ್ಕೆ

**ಅಭಿಮುಖ :** ಪೂರ್ವಾಭಿಮುಖ

**ಸ್ಮಾರಕ :** ಭೀಮೇಶ್ವರ ದೇವಾಲಯ

**ಸ್ಥಿತಿ :** ಉತ್ತಮ

**ಕಾಲ :** ಕ್ರಿ.ಶ.೧೧ನೇ ಶತಮಾನ

**ಪಂಥ :** ಶೈವ

**ಸಂರಕ್ಷಣೆ :** ಪುರಾತತ್ತ್ವ ಇಲಾಖೆ

ಈ ದೇವಾಲಯವನ್ನು ಹಿರಿಯ ಕೆರೆಗೆ ಹೊಂದಿಕೊಂಡಂತೆ ನಿರ್ಮಿಸಲಾಗಿದೆ. ಇದರಲ್ಲಿ ಮೂರು ಗರ್ಭಗೃಹಗಳಿದ್ದು ಪ್ರತಿಯೊಂದು ಅಂತರಾಳವು ಪಶ್ಚಿಮ, ಉತ್ತರ, ದಕ್ಷಿಣ ದಿಕ್ಕುಗಳಿಗೆ ಅಭಿಮುಖವಾಗಿದೆ. ಸಭಾಮಂಟಪ, ಮುಖಮಂಟಪ ಪೂರ್ವಕ್ಕೆ ಇದ್ದು, ದೇವಸ್ಥಾನದ ಮುಖಮಂಟಪವು ಪೂರ್ವಕ್ಕೆ ಅಭಿಮುಖವಾಗಿದೆ. ಇದು ತ್ರಿಕೂಟಾಚಲ ದೇವಾಲಯವಾಗಿದೆ.



ಗರ್ಭಗೃಹಗಳ ವಿಸ್ತೀರ್ಣವು ೧೦x೮ ಅಡಿ ಹೊಂದಿದೆ. ಮುಂದೆ ತೆರೆದ ಅಂತರಾಳವು ೧೩x೯ ವಿಸ್ತೀರ್ಣವಿದೆ. ಇವೆಲ್ಲವುಗಳಿಗೆ ಹೊಂದಿಕೊಂಡಂತೆ ಒಂಬತ್ತು ಅಂಕಗಳ ಒಂದೇ ನವರಂಗವಿದೆ. ಈ ನವರಂಗದ ಮುಂದೆ ಮುಖಮಂಟಪವಿದ್ದು, ಎರಡು ಬದಿಗಳಿಂದ ಉತ್ತರ ಮತ್ತು ದಕ್ಷಿಣಕ್ಕೆ ಪ್ರವೇಶಿಸಬಹುದು. ಈ ಮಂಟಪವನ್ನು ಪಶ್ಚಿಮ ಅಭಿಮುಖವಾಗಿರುವ ನಾಲ್ಕನೆಯ ನಂದಿಮಂಟಪಕ್ಕೆ ಜೋಡಿಸಲಾಗಿದೆ.[೪]

ಈ ದೇವಸ್ಥಾನದ ಹೊರಭಾಗದ ಅಧಿಷ್ಠಾನವು ಉಪಾನ, ಪದ್ಮ, ಕುಮುದ, ಕಂಠಗಳಿಂದ ಕೂಡಿದೆ. ಈ ಅಧಿಷ್ಠಾನದ ಈ ಭಾಗದಲ್ಲಿ ಮಕರಗಳನ್ನು ಮುಂಗಾಲು ಎತ್ತಿ ನಿಂತಿರುವ ಸಿಂಹಗಳನ್ನು ಮತ್ತು ಚಿಕ್ಕ ಆಕಾರದ ಮೂರ್ತಿಗಳನ್ನು ಕೆತ್ತಲಾಗಿದೆ. ಇದರಲ್ಲಿ ಬಹಳ ಸೂಕ್ಷ್ಮವಾದ ಸರಸ್ವತಿ, ರತಿಮನ್ಮಥ, ರಾಮಲಕ್ಷ್ಮಣ, ಸೀತೆ, ಹನುಮಂತ, ಯಕ್ಷವಾದ್ಯದವರು, ನರ್ತನಗೈಯುತ್ತಿರುವವರು ಮತ್ತು ಕೀರ್ತಿಮುಖಗಳಿಂದ ಅಲಂಕರಿಸಲಾಗಿದೆ.[೫] ಮುಖಮಂಟಪಕ್ಕೆ ಹೊಂದಿಕೊಂಡಂತಿರುವ ಮಂಟಪದ ಮೇಲೆ ಈ ಶೃಂಗಾರ ಮೂಡಿಬಂದಿಲ್ಲ. ಆದರ ಬದಲಾಗಿ ತೊಲೆಗಳ ನಾಲ್ಕು ಆಂಕಣ ಅಡ್ಡಲಾಗಿ ಹಾಕಿದ್ದು, ಕೆತ್ತುವ ಯೋಜನೆ ಇಟ್ಟುಕೊಂಡಿರಬೇಕು.

ಈ ದೇವಸ್ಥಾನದ ಭಿತ್ತಿಯ ಭಾಗವು ಏಕಜೋಡಿ ಅರೆಕಂಬಗಳಿಂದ ಅಲಂಕೃತಗೊಂಡಿದೆ. ಇಲ್ಲಿನ ದೊಡ್ಡ ದೊಡ್ಡ ಅರೆಕಂಬಗಳ ಮೇಲೆ ದ್ರಾವಿಡ(ಮೈತರ) ಶೈಲಿಯ ಶಿಖರ ಮಾದರಿಯನ್ನು ಕೆತ್ತಲಾಗಿದೆ.

ಅಲ್ಲಲ್ಲಿ ಕಿರುಗಾತ್ರದ ಅರೆಗಂಬಗಳನ್ನು ಹಾಗೂ ಕ್ರಮಬದ್ಧ ಅಂತರದಲ್ಲಿ ಎದ್ದು ಕಾಣುವ ಕುಚ್ಚುಗಳುಳ್ಳ ಅರೆಕಂಬಗಳಿವೆ. ಇಂತಹ ಅರೆಗಂಬಗಳು ನಡುವೆ ಅನೇಕ ಸಣ್ಣ ಸಣ್ಣ ಅರೆ ಕಂಬಗಳನ್ನು ಕೆತ್ತಲಾಗಿದೆ.[೬] ಇಲ್ಲಿನ ಪಂಜರಗಳಲ್ಲಿ ಮೂರ್ತಿಗಳಿಲ್ಲ. ಪಶ್ಚಿಮ ಭಾಗದ ಗರ್ಭಗುಡಿಯ ದಕ್ಷಿಣ, ಉತ್ತರ, ಪಶ್ಚಿಮ ದಿಕ್ಕಿನ ದೇವಾಲಯದ ಹಿಂಭಾಗದಲ್ಲಿ ಮೂರು ದೇವರ ಕೋಷ್ಟಕಗಳಿವೆ. ಇವುಗಳ ದ್ವಾರವು ಸರಳ ಶಾಖೆಗಳಿಂದ ಕೂಡಿದ್ದು, ಮೇಲಿನ ಭಾಗ ಶಿಖರದ ಮಾದರಿಯನ್ನು ಹೋಲುತ್ತದೆ. ಈ ಮೇಲಿನ ಉತ್ತರದ ಕೋಷ್ಟಕಗಳಲ್ಲಿ ಕ್ರಮವಾಗಿ ಉಗ್ರನರಸಿಂಹ, ಸರಸ್ವತಿ ಮತ್ತು ನಾಟ್ಯಶಿವನ ಮೂರ್ತಿಗಳಿವೆ. ನವರಂಗದ ಪೂರ್ವಭಾಗದ ಭಿತ್ತಿಯಲ್ಲಿ ಚೌಕಾಕಾರದೊಳಗೆ ಪುಷ್ಪ ಅಲಂಕರಣವನ್ನು ಮಾಡಲಾಗಿದೆ. ಇದೇ ಅಲಂಕರಣೆ ಪಟ್ಟಿಕೆಯೂ ಪ್ರತ್ಯೇಕವಾಗಿ ಚೌಕಾಕಾರದ ಎರಡು ಜಾಲಂಧ್ರಗಳನ್ನು ಅಳವಡಿಸಿರುವುದು ವಿಶೇಷವೆನ್ನಿಸುತ್ತದೆ.

ಭಿತ್ತಿಯ ಮೇಲಿನ ಪ್ರಸ್ತರದಲ್ಲಿ ಕಪೋತ ಭಾಗವಿದ್ದು, ಅದು ದೇವಾಲಯದ ಸುತ್ತಲೂ ಹೊರಚಾಚಿದ ರೀತಿಯಲ್ಲಿದೆ. ಈ ಪ್ರಸ್ತರದ ಭಾಗವನ್ನು ಕೋಷ್ಟ ಪಂಜರಗಳಿಂದ ಅಲಂಕರಿಸಿಲಾಗಿದೆ. ಪಶ್ಚಿಮ ಗರ್ಭಗುಡಿಯ ಮೇಲೆ ಮಾತ್ರ ಶಿಖರ ಉಳಿದಿದೆ. ಈ ಶಿಖರವು ಮೂರು ತಲಗಳಿಂದ ಕೂಡಿದೆ. ಮೊದಲ ತಲದಲ್ಲಿನ ಶಿಖರದ ಮುಂಭಾಗದಲ್ಲಿ ಸುಕನಾಸಿ ಇದ್ದು, ಅದರಲ್ಲಿ ಹಲವಾರು ವಿಗ್ರಹಗಳನ್ನು ಒಳಗೊಂಡಿದೆ. ಅದರಲ್ಲಿ ನಟರಾಜನ ಮೂರ್ತಿ ಇದೆ. ಉಳಿದಂತೆ ಶಿಖರವು ಕೂಡ ಶಾಲಾ ಪಂಜರಗಳಿಂದ ಕೂಡಿದ್ದು ಅಲ್ಲಲ್ಲಿ ವಿವಿಧ ರೀತಿಯ ಚಿತ್ರಗಳನ್ನು ಮಾಡಲಾಗಿದೆ(ಕೆತ್ತಲಾಗಿದೆ). ಶಿಖರದ ಮೇಲೆ ಸೂಪ್ತಿ ಇದೆ.[೭]

ಶಿಖರದ ಕೆಳಭಾಗದಲ್ಲಿ ಅಂದರೆ (ದೇವರ) ಶಿವಲಿಂಗದ ಮೇಲೆ ಶಿಖರದ ಒಳಭಾಗದಲ್ಲಿ ಗರಡಿಯ ಮನೆಯಂತೆ ಇರುವುದು ಕಂಡುಬರುತ್ತದೆ. ಮೇಲುಭಾಗದಿಂದ ಇಳಿದು ಕುಸ್ತಿಯನ್ನು ಆಡುತ್ತಿದ್ದರೆಂದು ತಿಳಿದುಬಂದಿದೆ.

ದೇವಸ್ಥಾನದ ಒಳಭಾಗದಲ್ಲಿ ಪಶ್ಚಿಮ ಭಾಗದ ಮುಖ್ಯಗರ್ಭಗುಡಿಯು ಚೌಕಾರವಾಗಿದ್ದು, ಅದರಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇದರ ದ್ವಾರದ ಎರಡೂ ಕಡೆ ಶೈವ ದ್ವಾರಪಾಲಕರಿದ್ದು, ಅವರ ಬಳಿ ಚಾಮರಧಾರಿ ಸ್ತ್ರೀಯರಿದ್ದಾರೆ. ದ್ವಾರವು ಚೌಕಾಕಾರದ ಪುಷ್ಪ ಶಾಖೆ, ಲತೆಗಳನ್ನೊಳಗೊಂಡಂತೆ ಸುರಳಿಯಾಕಾರದ ಸ್ತಂಭ ಶಾಖೆ, ಲತಾ ಮತ್ತು ಪುಷ್ಪ ದಳಗಳಿಂದ ಕೂಡಿದ ಪತ್ರ ಶಾಖೆಗಳನ್ನೊಳಗೊಂಡಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಇದರ ಮೇಲೆ ಉತ್ತರಾಂಗ ಭಾಗದಲ್ಲಿ ಐದು ಶಿಖರ ಮಾದರಿಗಳನ್ನು ಕೆತ್ತಲಾಗಿದೆ.[೮]

ಗರ್ಭಗುಡಿಯ ಮುಂದಿನ ಅಂತರಾಳವು ಚೌಕಾಕಾರವಾಗಿದೆ. ಅದರ ಬಾಗಿಲನ್ನು ಸುಂದರವಾಗಿ ಕೆತ್ತಲಾಗಿದೆ. ಅದರ ಅಡಿಯಲ್ಲಿ ಚೌಕಾಕಾರದ ಕೆತ್ತನೆಯ ಶಿಲಾಬಂಡೆಗಲ್ಲು ಇದೆ. ಇದರ ಬಲಭಾಗದಲ್ಲಿ

ಶೈವ ದ್ವಾರಪಾಲಕ ಚತುರ್ಭುಜಧಾರಿಯಾಗಿದ್ದು, ತ್ರಿಭಂಗಿಯಲ್ಲಿ ನಿಂತಿದ್ದಾನೆ. ಇವನ ಕೈಯಲ್ಲಿ ತ್ರಿಶೂಲ, ಡಮರು, ಕೆಳಗಿನ ಬಲಗೈಯಲ್ಲಿ ಗದೆ ಹಿಡಿದಿದ್ದಾನೆ. ಕೆಳಗಿನ ಎಡಗೈಯಲ್ಲಿ ಅಭಯ ಮುದ್ರೆ ಹಿಡಿದುಕೊಂಡು ತ್ರಿಭಂಗಿಯಲ್ಲಿ ನಿಂತಿದ್ದಾನೆ. ಈ ದ್ವಾರಪಾಲಕನ ಎಡಬದಿಗೆ ಪದ್ಮ ಕಮಲಗಳನ್ನು ಹಿಡಿದು ಸ್ತ್ರೀಯೊಬ್ಬಳು ತ್ರಿಭಂಗಿಯಲ್ಲಿ ನಿಂತಿದ್ದಾಳೆ. ಹಾಗೂ ಈ ದ್ವಾರಪಾಲಕನ ಬಲಬದಿಗೆ ಪುರುಷನೊಬ್ಬನನ್ನು ಕೆತ್ತಲಾಗಿದೆ.[೯] ಎಡಭಾಗದಲ್ಲಿನ ಶೈವ ದ್ವಾರಪಾಲಕನು ತ್ರಿಭಂಗಿಯಲ್ಲಿ ನಿಂತಿದ್ದು, ಈತ ಖಟ್ವಾಂಗ ಡಮರುಗಳನ್ನು ಮೇಲಿನ ಕೈಗಳಲ್ಲಿ ಗದೆಯನ್ನು ಹಿಡಿದುಕೊಂಡಿದ್ದು, - ಎಡಗೈಯಲ್ಲಿ ಹಿಡಿದಿದ್ದು, ಬಲಗೈ ಅಭಯ ಮುದ್ರೆಯಲ್ಲಿರುವಂತಿದೆ. ಈ ದ್ವಾರಪಾಲಕನ ಬಲಬದಿಗೆ ಪುಷ್ಪ ಫಲಗಳನ್ನು ಹಿಡಿದ ಸ್ತ್ರೀ ಇದ್ದಾಳೆ. ಹಾಗೂ ದ್ವಾರದ ಬಾಗಿಲನ್ನು ಪುರುಷನೊಬ್ಬ ಹಿಡಿದು ನಿಂತಿರುವ ರೀತಿಯಲ್ಲೂ ಕೆತ್ತಲಾಗಿದೆ. ದ್ವಾರವು ರತ್ನಶಾಖೆ, ಸುರಳಿಯಾಕಾರದ ಲತಾಶಾಖೆ ಚೌಕಾಕಾರದ ಸ್ತಂಭಶಾಖೆ ಹಾಗೂ ಲತಾ ಮತ್ತು ಪುಷ್ಪ ಶಾಖೆಗಳಿಂದ ಕೂಡಿದೆ.[೧೦]

ಈ ಶಾಖೆಗಳಿಗೆ ಹೊಂದಿಕೊಂಡಂತೆ ಮೂರು ಸಾಲಿನ ಸುರುಳಿಯಾಕಾರದ ಜಾಲಂಧ್ರಗಳಿದ್ದು, ಇಲ್ಲಿನ ಪ್ರತಿಯೊಂದು ಸುರುಳಿಯುಕ್ತ ಜಾಲಂದಗಳನ್ನು ಪ್ರಾಣಿ, ಪಕ್ಷಿಗಳ, ಹೂವು, ನೃತ್ಯಗಾರ, ಸಂಗೀತಗಾರರು ಇಲ್ಲವೇ ಯಕ್ಷ ಶಿಲ್ಪಗಳಿಂದ ಅಲಂಕರಿಸಲಾಗಿದೆ. ದ್ವಾರದ ಮೊದಲಿನ ಎರಡು ಶಾಖೆಗಳು ಬಾಗಿಲುವಾಡದವರೆಗೂ ಮುಂದುವರೆದಿದೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವನ್ನು ಚೌಕಾಕಾರದಲ್ಲಿ ಶಿಲ್ಪವನ್ನು ಕೆತ್ತಲಾಗಿದೆ.[೧೧] ಇದರ ಮೇಲಿನ ಉತ್ತರಾಂಗ ಭಾಗದಲ್ಲಿ (ಮೂಲತಃ ಇದ್ದ ಮಕರ ತೋರಣವೀಗ ಕಾಣಬರುತ್ತಿಲ್ಲ) ಎಡಬಲದಲ್ಲಿ ಸ್ತಂಭಗಳ ಮೇಲಿನ ಭೋದಿಗೆಗಳ ಎರಡೂ ಬದಿಗಳಲ್ಲಿ ಮಕರಗಳಿದ್ದು, ಅವುಗಳನ್ನು ಸವಾರಿ ಮಾಡುವಂತೆ ಇಬ್ಬರು ಯಕ್ಷರನ್ನು ಕೆತ್ತಲಾಗಿದೆ. ಈ ಮಕರಗಳ ಮಧ್ಯದಲ್ಲಿ ತ್ರಿಮೂರ್ತಿಗಳನ್ನು ಪತ್ನಿ ಸಮೇತವಾಗಿ ಕೆತ್ತಿರುವುದು ವಿಶೇಷವಾಗಿದೆ. ಇವುಗಳಲ್ಲಿ ಶಿವನ ತೊಡೆಯ ಮೇಲೆ ಕುಳಿತ ಮೂರ್ತಿಯು ಆಕರ್ಷಕವಾಗಿದೆ. ಈ ಶಿಲ್ಪದ ಕೆಳಭಾಗದಲ್ಲಿ ಅವರ ವಾಹನಗಳಾದ ನಂದಿ ಮತ್ತು ಮುಂಗಲಿಗಳನ್ನು ಚಿಕ್ಕದಾಗಿ ಬಿಡಿಸಲಾಗಿದೆ. ಬದಿಯಲ್ಲಿ ಗಣೇಶ ಮತ್ತು ನವಿಲಿನ ಮೇಲೆ ಕುಳಿತಿರುವ ಕಾರ್ತಿಕೇಯರಿದ್ದಾರೆ. ಉಮಾ ಮಹೇಶ್ವರ ಬಲಬದಿಗೆ ಚತುರ್ಮುಖ ಬ್ರಹ್ಮ ಅವನ ತೊಡೆಯ ಮೇಲೆ ಸರಸ್ವತಿ ಕುಳಿತಿರುವ ಶಿಲ್ಪವಿದೆ. ಎಡಬದಿಗೆ ಲಕ್ಷ್ಮೀ ಸಮೇತ ವಿಷ್ಣು ಆಸೀನನಾಗಿದ್ದಾನೆ. ಈ ತ್ರಿಮೂರ್ತಿಗಳ ಬಳಿ ಚಾಮರ ಹಿಡಿದ ಸ್ತ್ರೀಯರ ಶಿಲ್ಪಗಳನ್ನು ಕೆತ್ತಲಾಗಿದೆ.[೧೨]

ನವರಂಗದ ಅಗಲ ೨೪x೨೦ ಉದ್ದ ೨೬ ಮತ್ತು ಉತ್ತರದಲ್ಲಿ ಗರ್ಭಗುಡಿಗಳಿವೆ. ದಕ್ಷಿಣದ ಗರ್ಭಗುಡಿಯು ೧೪x೧೪ ಅಡಿ ಚೌಕಾಕಾರವಾಗಿದ್ದು ಇಲ್ಲಿ ಮೂರ್ತಿಯಿಲ್ಲ. ದ್ವಾರದಲ್ಲಿ ಅಪೂರ್ವವಾಗಿರುವ ಐದು ಶಾಖೆಗಳಿದ್ದು, ಇವು ಲಲಾಟದವರೆಗೂ ಮುಂದುವರೆದಿದೆ. ಲಲಾಟ ಬಿಂಬದಲ್ಲಿ ಚೌಕಾಕಾರದ ಪಟ್ಟಿಯಿರದಿದ್ದರೂ ಅಲ್ಲಿ ಗಜಲಕ್ಷ್ಮಿಯ ಚಿಕ್ಕ ಶಿಲ್ಪವೊಂದನ್ನು ಕೆತ್ತಲಾಗಿದೆ. ಈ ಗರ್ಭಗೃಹದ ಮುಂದಿನ ತೆರೆದ ಅಂತರಾಳವು ಆಯತಾಕಾರವಾಗಿದೆ. ಇದರ ಎರಡೂ ಬದಿಗೆ ನಕ್ಷತ್ರಾಕಾರದ

ಅರೆಕಂಬಗಳಿದ್ದು, ಅವುಗಳಲ್ಲಿ ಒಂದು ಪೀಠದಲ್ಲಿ ಆನೆಗಳನ್ನು ಚಿತ್ರಿಸಲಾಗಿದೆ.

ಉತ್ತರ ಗರ್ಭಗುಡಿಯು ೧೪x೧೪ ಅಡಿ ಚೌಕಾಕಾರವಾಗಿದ್ದು, ಅದರಲ್ಲೂ ಕೇವಲ ಪೀಠ ಮಾತ್ರ ಉಳಿದಿದೆ. ಯಾವುದೇ ಮೂಲೆಯಿಲ್ಲ. ಇದರ ದ್ವಾರವು ರತ್ನ ಲತಾ, ಸ್ಥಂಭ ಮೊದಲಾದ ಎಂಟು ಶಾಖೆಯನ್ನು ಒಳಗೊಂಡಿದೆ. ಈ ಎಂಟು ಶಾಖೆಗಳು ದ್ವಾರದ ಪೇದ್ಯಾ(ದ್ವಾರಪಾಲಕರಿರುವ ಭಾಗ) ಭಾಗಕ್ಕೂ ಮುಂದುವರಿದಿದೆ. ಇಲ್ಲಿನ ಲತಾ ಶಾಖೆಗಳು ಲಲಾಟ ಬಿಂಬದವರೆಗೂ ಮುಂದುವರೆದಿವೆ. ಲಲಾಟ ಬಿಂಬದಲ್ಲಿ ಸಣ್ಣ ಗಜಲಕ್ಷ್ಮಿ ಶಿಲ್ಪವಿದೆ. ಈ ಗರ್ಭಗುಡಿಯ ಮುಂದೆ ತೆರದ ಅಂತರಾಳವನ್ನು ಹೊಂದಿದ್ದು, ಅದು ಆಯತಾಕಾರವಾಗಿದೆ. ಅಂತರಾಳದ ಎರಡೂ ಬದಿಯಲ್ಲಿ ಅತ್ಯಂತ ಸೂಕ್ಷ್ಮವಾಗಿ ಕೆತ್ತಿದ ನಕ್ಷತ್ರಾಕಾರದ ಅರ್ಧ ಕಂಬಗಳಿವೆ. ಈ ಕಂಬಗಳ ಪೀಠಭಾಗವು ವೃತ್ತಾಕಾರವಾಗಿದ್ದು, ಅದರಲ್ಲಿ ಮೂಲತಃ ಕೆತ್ತಿದ ಶಿಲ್ಪಗಳು ಈಗ ಕಣ್ಮರೆಯಾಗಿವೆ.[೧೩]

ನವರಂಗದಲ್ಲಿ ನಾಲ್ಕು ಕೋಷ್ಟ ಗೂಡುಗಳಿದ್ದು, ಎರಡು ಪಶ್ಚಿಮಕ್ಕೆ ಒಂದು ಉತ್ತರಕ್ಕೆ ಇನ್ನೊಂದು ದಕ್ಷಿಣ ಗೋಡೆಗಳಲ್ಲಿ ತಲಾ ಒಂದೊಂದು ಕೋಷ್ಟಗೂಡುಗಳಿವೆ. ಇವುಗಳ ದ್ವಾರದಲ್ಲಿ ಸ್ತಂಭ ಶಾಖೆಯನ್ನು ಬಿಡಿಸಲಾಗಿದೆ. ಈ ಕೋಷ್ಠ ಗೂಡುಗಳ ಮೇಲ್ಭಾಗದ ಮಧ್ಯದಲ್ಲಿ ದ್ರಾವಿಡ ಶೈಲಿಯ ಶಿಖರವು ಅಲಂಕೃತಗೊಂಡಿದೆ. ಅದರ ಎರಡೂ ಕಡೆಗೂ(ಬದಿಗೂ) ನಾಗರಶೈಲಿಯ ಶಿಖರವನ್ನು ಕೆತ್ತಲಾಗಿದೆ. ದಕ್ಷಿಣ ಕೋಷ್ಠಗೂಡಿನಲ್ಲಿ ಗಣೇಶ ಮೂರ್ತಿ ಇದ್ದರೆ, ಉತ್ತರ ಕೋಷ್ಟಗೂಡಿನಲ್ಲಿ ಮಹಿಷಾಸುರ ಮರ್ದಿನಿ ಮೂರ್ತಿ ಇದೆ. ಪಶ್ಚಿಮ ಭಾಗದ ದೇವಕೋಷ್ಟಕಗಳಲ್ಲಿ ಸಪ್ತ ಮಾತೃಕೆಯರ ಮೂರ್ತಿ ಹಾಗೂ ಕುಳಿತ ಯಕ್ಷನಿದ್ದಾನೆ.[೧೪]

ನವರಂಗದಲ್ಲಿ ಅಲಂಕರಿಸಲ್ಪಟ್ಟ ನಾಲ್ಕು ಕಂಬಗಳಿವೆ. ಅವುಗಳ ಪೀಠ ಭಾಗವು ಚೌಕಾಕಾರವಾಗಿದ್ದು, ಅದರ ಮೇಲ್ಭಾಗ ವೃತ್ತಾಕಾರವಾಗಿದ್ದು, ಇದರಲ್ಲಿ ಕುಂಭದ ಹಾಗೂ ಗಂಟೆಯಾಕಾರದ ಅಲಂಕಾರವನ್ನು ಕಾಣಬಹುದು. ಅದರ ಮೇಲಿನ ಬೋದಿಗೆಗಳು ಪುಷ್ಪ ದಳಗಳಿಂದ ಅಲಂಕೃತಗೊಂಡಿದೆ. ಈಶಾನ್ಯ ಭಾಗದ ಕಂಬವೊಂದರಲ್ಲಿ ಮಾತ್ರ ದಕ್ಷಿಣ ಮತ್ತು ಪಶ್ಚಿಮ ಭಾಗದಲ್ಲಿ ಶಿಲ್ಪಗಳನ್ನು ಕೊರೆಯಲಾಗಿದೆ. ಈ ಕಂಬದ ದಕ್ಷಿಣ ಮುಖದಲ್ಲಿ ಶಿವನು ಡಮರು, ತ್ರಿಶೂಲ, ಕತ್ತಿ ಮತ್ತು ಕಪಾಲ ಹಿಡಿದಿರುವಂತೆ ಕೆತ್ತಲಾಗಿದ್ದು, ಅಲ್ಲಿ ಇಬ್ಬರು ಸೇವಕರಿದ್ದು, ಶೈವ ದ್ವಾರಪಾಲಕರಂತೆ ನಿಂತಿದ್ದಾರೆ. ಮೇಲಿನ ತೋರಣ ಭಾಗವು ಮುರಿದಿದ್ದು, ಎರಡು ಕಡೆ ಅರ್ಧಗಂಭಗಳ ಮೇಲೆ ದ್ರಾವಿಡ ಶೈಲಿಯಲ್ಲಿ ಕೆತ್ತಿದ ಗೋಪುರಗಳಿವೆ.

ನವರಂಗದ ಮುಚ್ಚಿಗೆ(ಭುವನೇಶ್ವರಿ)ಯಲ್ಲಿ ಅರಳಿದ ಕಮಲವನ್ನು ಕೆತ್ತಲಾಗಿದೆ. ವೃತ್ತಾಕಾರದ ಸುಳಿಯೊಳಗೆ ಅಲ್ಲಲ್ಲಿ ಕೀರ್ತಿಮುಖಗಳನ್ನು ಚಿತ್ರಿಸಲಾಗಿದೆ. ಮೇಲಿನ ಹಂತದಲ್ಲಿ ನಾಲ್ಕು ಜನ ಹಾಗೂ ಕೆಳಗಿನ ಹಂತದಲ್ಲಿ ನಾಲ್ಕು ಜನ ದಿಕ್ಪಾಲಕರನ್ನು ಕೆತ್ತಲಾಗಿದೆ. ಭುವನೇಶ್ವರಿಯ ಉಳಿದ ಭಾಗದಲ್ಲಿ ಅಲ್ಲಲ್ಲಿ ಚಿಕ್ಕ ಪದ್ಮಗಳನ್ನು ಕೆತ್ತಲಾಗಿದೆ.[೧೫]

ಮುಖಮಂಟಪವು ನಾಲ್ಕು ಚೌಕ ಅಷ್ಟಾಕಾರದ ಕಂಬಗಳಿಂದ ಕೂಡಿದ್ದು, ದಕ್ಷಿಣ ಮತ್ತು ಉತ್ತರದಿಂದ ಈ ಮಂಟಪವನ್ನು ಪ್ರವೇಶಿಸಲು ಪ್ರವೇಶದ್ವಾರ ಹಾಗೂ ಸೋಪಾನಗಳಿವೆ. ಮುಖಮಂಟಪಕ್ಕೆ ಹೊಂದಿಕೊಂಡಂತಿರುವ ಪೂರ್ವದ ಗರ್ಭಗೃಹದಲ್ಲಿ ಸಣ್ಣ(ಚಿಕ್ಕ) ನಂದಿ ಇದೆ. ಇದರ ದ್ವಾರವು ಐದು ಶಾಖೆಗಳಿಂದ ಕೂಡಿದೆ. ಇದರಲ್ಲಿ ಅಲಂಕಾರ ಕಂಡುಬರುವುದಿಲ್ಲ. ಈ ದೇವಾಲಯವು ಕಲ್ಯಾಣ ಚಾಲುಕ್ಯರ ವಾಸ್ತುಶೈಲಿಯ ಅತ್ಯುತ್ತಮ ಉದಾಹರಣೆಯಾಗಿದ್ದು, ಇದು ಇವರ ಕಾಲದಲ್ಲಿ ನಿರ್ಮಾಣವಾಗಿದೆ.

ಕಲ್ಯಾಣಿ ಚಾಲುಕ್ಯರು ಕಲಚೂರ್ಯರು, ಹೊಯ್ಸಳರು, ಎಲ್ಲ ಸಾಮ್ರಾಜ್ಯದ ಅರಸರು ಭೀಮೇಶ್ವರ ದೇವಾಲಯಕ್ಕೆ ದತ್ತಿ ಬಿಟ್ಟ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ. ಅಲ್ಲದೆ ಹೊಯ್ಸಳ ದೊರೆಯಾದ ವೀರಬಲ್ಲಾಳನ ಆಳ್ವಿಕೆಯ ಅವಧಿಯಲ್ಲಿ ಈ ದೇವಾಲಯದ ನವರಂಗದಲ್ಲಿನ ತೊಲೆಯೊಂದನ್ನು ದುರಸ್ತಿ ಮಾಡಿಸಿದನೆಂದು ಉಲ್ಲೇಖಿಸುತ್ತದೆ.[೯]

ಈ ದೇವಾಲಯವನ್ನು ಪ್ರಾಚೀನ ಸ್ಮಾರಕ ಪುರಾತತ್ವದ ಸ್ಥಳ ಹಾಗೂ ಅವಶೇಷಗಳ ಅಧಿನಿಯಮ ೧೯೫೮ ೨೪ರ ಪ್ರಕಾರ ಈ ಸ್ಮಾರಕವನ್ನು ರಾಷ್ಟ್ರೀಯ ಮಹತ್ವ ಸ್ಮಾರಕವೆಂದು ಘೋಷಿಸಲಾಗಿದೆ. ಅಂದಿನಿಂದ ಇಲ್ಲಿ ಒಬ್ಬ ಸಂರಕ್ಷಣೆಕಾರನನ್ನು ನೇಮಕಮಾಡಿರುವುದನ್ನು ಮನಗಾಣಬಹುದು.

ಗ್ರಾಮ : ನೀಲಗುಂದ — ಶೈಲಿ : ಕಲ್ಯಾಣಿ ಚಾಲುಕ್ಯ

ಸ್ಥಳ : ಗ್ರಾಮದ ಪಶ್ಚಿಮ ಭಾಗದಲ್ಲಿ — ಅಭಿಮುಖ : ಪೂರ್ವಾಭಿಮುಖ

ಸ್ಮಾರಕ : ಲಕ್ಷ್ಮೀನಾರಾಯಣ ದೇವಾಲಯ — ಸ್ಥಿತಿ : ಕನಿಷ್ಠ

ಕಾಲ : ಕ್ರಿ.ಶ.೧೨ನೇ ಶತಮಾನ [೯] — ಪಂಥ : ವೈಷ್ಣವ

ಸಂರಕ್ಷಣೆ : ಇಲ್ಲ

ಈ ದೇವಾಲಯ ಗರ್ಭಗುಡಿ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಲಕ್ಷ್ಮೀನಾರಾಯಣ ದೇವಸ್ಥಾನವು ಹೊರಭಾಗದಲ್ಲಿ ಅಧಿಷ್ಠಾನವನ್ನು ಹೊಂದಿದೆ. ಉಪಾನ, ಪದ್ಮ, ಕುಮುದ, ವಿವಿಧ ಆಕಾರಗಳಲ್ಲಿ ಸಮತಲವಾಗಿ ಹೊರಚಾಚಿದೆ. ಕಪೋತ ಸಹ ಪಾರಿವಾಳದ ತಲೆಯ ಆಕಾರದಲ್ಲಿ ಮುಂದೆ ಚಾಚಿದೆ. ಇದರ ಅಧಿಷ್ಠಾನದ ಭಾಗವು ಮಕರಗಳ ತಲೆಯಿಂದ ಹಾಗೂ(ಪದ್ಮ) ತಾವರೆಯ ದಳದ ಆಕಾರದಲ್ಲಿ ಅಲಂಕರಿಸಲ್ಪಟ್ಟಿದೆ.[೧೦] ಭಿತ್ತಿಯು ಸಹಾ ಎರಡು ಭಾಗದಲ್ಲಿ ಮಾತ್ರ ಮೂಲಭಿತ್ತಿಯು ಉಳಿದಿದೆ. ಅದರ ಮೇಲೆ ಅರೆಕಂಬಗಳನ್ನು ಕೆತ್ತಲಾಗಿದೆ. ಭಿತ್ತಿಯು ಈಚೆಗೆ ಅನ್ಯರ ರಕ್ಷಣೆಗೆಂದು ಆ ಸ್ಥಳದಲ್ಲಿ ಸಿಗುವ ಕಲ್ಲುಗಳಿಂದ ಕಟ್ಟಿದ್ದಾರೆ. ಭಿತ್ತಿಯ ಮೇಲಿನ ಪುಸ್ತಕ ಹಾಗೂ ಶಿಖರ ಭಾಗಗಳು ನಾಶವಾಗಿರಬಹುದು. ಅಂದರೆ ಈಗ ಉಳಿದಿಲ್ಲ.

ಚೌಕಾಕಾರದ ಗರ್ಭಗುಡಿಯು ೧೦x೧೦ ಅಡಿ ಇದೆ. ಇಲ್ಲಿ ಲಕ್ಷ್ಮೀನಾರಾಯಣನ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಲಾಗಿತ್ತು. ಇದನ್ನು ರಕ್ಷಣೆ ಮಾಡುವ ಉದ್ದೇಶದಿಂದ ಪುರಾತತ್ವ ಇಲಾಖೆಯವರು

ರಕ್ಷಣೆ ಇರುವ ಭೀಮೇಶ್ವರ ದೇವಾಲಯದಲ್ಲಿ ಇರಿಸಿದ್ದಾರೆ. ಈಗಲೂ ಅದೇ ಸ್ಥಳದಲ್ಲಿದೆ. ಗರ್ಭಗೃಹದ ದ್ವಾರದ ಸ್ತಂಭದ ಶಾಖೆಯೊಂದನ್ನು ಬಿಟ್ಟರೆ, ಉಳಿದ ಶಾಖೆಗಳಲ್ಲಿ ಅಲಂಕಾರ ಕಂಡುಬರುವುದಿಲ್ಲ. ದೇವಾಲಯದ ಅಂತರಾಳವು ೮x೧೦ ಅಡಿ ಇದೆ. ಇಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ. ಇದರ ದ್ವಾರದ ಪೇದ್ಯಾ ಭಾಗದಲ್ಲಿ ಪೂರ್ಣ ಬರುವ ಕಂಬಗಳನ್ನು ಕೆತ್ತಲಾಗಿದೆ. ದ್ವಾರದಲ್ಲಿ ಬರುವ ಸ್ತಂಭ ಶಾಖೆಯೊಂದನ್ನು ಅಲಂಕರಿಸಲಾಗಿದೆ. ಉಳಿದವುಗಳನ್ನು ಹಾಗೆ ಬಿಡಲಾಗಿದೆ. ಲಲಾಟ ಮತ್ತು ಗಜಲಕ್ಷ್ಮಿ ಶಿಲ್ಪ ಕಂಡುಬರುತ್ತದೆ.[೧೯]

ನವರಂಗದಲ್ಲಿ ೩೬x೨೪ ಅಡಿ ಕಂಡುಬರುವ ಆರು ಸಾಲುಗಳಲ್ಲಿ ಮೂವತ್ತಾರು ಕಂಬಗಳು ಇದ್ದು, ಇದರಲ್ಲಿ ಮಧ್ಯ ಬರುವ ನಾಲ್ಕು ಕಂಬಗಳನ್ನು ವೃತ್ತಾಕಾರ, ಚೌಕಾಕಾರ, ಅಷ್ಟಕೋನಾಕಾರದಲ್ಲಿವೆ. ಉಳಿದ ಕಂಬಗಳು ಸರಳವಾಗಿದೆ. ಬೋದಿಗೆಗಳು ಸರಳವಾಗಿದ್ದು ಇಲ್ಲಿನ ಮುಚ್ಚಿಗೆಯಲ್ಲಿ ಪದ್ಮವಿದೆ. ಇದರ ಪ್ರವೇಶದ್ವಾರವು ರತ್ನ, ಸ್ಥಂಭ ಮತ್ತು ಲತಾ ಶಾಖೆಗಳಿಂದ ಅಲಂಕೃತಗೊಂಡಿದೆ. ದೇವಾಲಯ ನಿರ್ಮಾಣ ರೀತಿ ಮತ್ತು ವಾಸ್ತು ಲಕ್ಷಣಗಳನ್ನು ಗಮನಿಸಿದರೆ ಈ ದೇವಾಲಯವು ಕಲ್ಯಾಣ ಚಾಲುಕ್ಯರ ಆಡಳಿತ ಕಾಲಾವಧಿಯಲ್ಲಿ ನಿರ್ಮಿಸಿರಬಹುದೆಂದು ಹೇಳಬಹುದು.

ಗ್ರಾಮ : ನೀಲಗುಂದ

ಶೈಲಿ : ಕಲ್ಯಾಣಿ ಚಾಲುಕ್ಯ

ಸ್ಥಳ : ಗ್ರಾಮದ ಪಶ್ಚಿಮ ಭಾಗದಲ್ಲಿ

ಅಭಿಮುಖ : ಪೂರ್ವಾಭಿಮುಖ

ಸ್ಮಾರಕ : ಅನಂತಶಯನ ದೇವಾಲಯ

ಸ್ಥಿತಿ : ಕನಿಷ್ಠ

ಕಾಲ : ಕ್ರಿ.ಶ.೧೧ನೇ ಶತಮಾನ[೨೦]

ಪಂಥ : ವೈಷ್ಣವ

ಸಂರಕ್ಷಣೆ : ಇಲ್ಲ

ಈ ದೇವಾಲಯ ಗರ್ಭಗುಡಿ, ಅಂತರಾಳ, ನವರಂಗ, ತೆರೆದ ಮುಖಮಂಟಪದಿಂದ ಕೂಡಿದೆ. ಆಧಿಷ್ಠಾನ, ಉಪಾನ, ಪದ್ಮ ಕಪೋತದಿಂದ ಕೂಡಿದೆ. ದೇವಾಲಯದ ಗರ್ಭಗುಡಿಯ ಮತ್ತು ಅಂತರಾಳದಲ್ಲಿ ಸ್ವಲ್ಪ ಭಾಗವನ್ನು ಬಿಟ್ಟರೆ ಉಳಿದ ಭಿತ್ತಿಯು ಬಹುತೇಕ ಹೆಚ್ಚು ಭಾಗ ಬಿದ್ದುಹೋಗಿದೆ. ಆ ಭಾಗದಲ್ಲಿ ಶಿಲ್ಪಗಳಾಗಲಿ, ಅಲಂಕರಣೆಗಳಾಗಲಿ ಕಂಡುಬರುವುದಿಲ್ಲ. ಮೂಲಗೋಡೆ ಉಳಿದಿರುವ ಭಾಗದಲ್ಲಿ ಅರೆಕಂಬಗಳಿವೆ. ಪ್ರಸ್ತುತದಲ್ಲಿನ ಕಪೋತ ಭಾಗವು ಸ್ವಲ್ಪ ಮುಂದೆ ಚಾಚಿದ ರೀತಿ ಕಂಡುಬರುತ್ತದೆ. ದೇವಾಲಯದ ಮೇಲಿರುವ ಶಿಖರ ಭಾಗ ಕಂಡುಬರುವುದಿಲ್ಲ.[೨೧]

ಈ ದೇವಾಲಯ ಗರ್ಭಗುಡಿಯು ಆಯತಾಕಾರವಾಗಿದ್ದು. ೧೦x೧೪ ಅಡಿ ವಿಸ್ತೀರ್ಣವಿದೆ. ಅದರಲ್ಲಿ ಅನಂತಶಯನ ಮೂರ್ತಿ ಇದೆ. ಇದರ ಮುಚ್ಚಿಗೆಯಲ್ಲಿ ಪದ್ಮವಿದ್ದು ದ್ವಾರವು ಸರಳವಾಗಿದೆ. ಇಲ್ಲಿನ ಅಂತರಾಳ ೧೦x೧೩ ಅಡಿ ಇದೆ. ಮತ್ತು ನವರಂಗದಲ್ಲಿ ಯಾವುದೇ ಮೂರ್ತಿಗಳಿಲ್ಲ. ದ್ವಾರವು ಸಾಧಾರಣವಾಗಿದೆ. ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವನ್ನು ಹೊಂದಿದೆ.

ನವರಂಗವು ೩೫ x ೨೪ ಅಡಿ ಇದೆ. ಇದರ ನಾಲ್ಕು ಸಾಲುಗಳಲ್ಲಿ ೧೬ ಕಂಬಗಳಿದ್ದು ಬಲಭಾಗದಲ್ಲಿರುವ ನಾಲ್ಕು ಕಂಬಗಳು ಬಿದ್ದು ಹೋಗಿವೆ. ಕಂಬಗಳು ವೃತ್ತಾಕಾರವಾಗಿವೆ. ಈ ಕಂಬಗಳ ಮೇಲಿನ ಬೋದಿಗೆಗಳು ಸರಳವಾಗಿವೆ. ಮೇಲಿನ ಮುಚ್ಚಿಗೆಯಲ್ಲಿ ಪದ್ಮವಿದೆ. ಇದರ ದ್ವಾರವು ಪುಷ್ಪ, ಲತಾ, ಸ್ಥಂಭ ಶಾಖೆಗಳಿಂದ ಕೂಡಿದೆ. ದ್ವಾರದಲ್ಲಿ ಗಜಲಕ್ಷ್ಮಿಯನ್ನು ಚೌಕಾಕಾರದ ಪಟ್ಟಿಯಲ್ಲಿ ಕೆತ್ತಲಾಗಿದೆ. ನವರಂಗದ ಮುಂಭಾಗದ ಪೂರ್ವಭಾಗಕ್ಕೆ ಮುಖಮಂಟಪವಿದ್ದು, ಇತ್ತೀಚಿನ ದಿನಗಳಲ್ಲಿ ಇದು ಸಂಪೂರ್ಣ ನಾಶವಾಗುವ ಸ್ಥಿತಿಯಲ್ಲಿದೆ. ಒಟ್ಟಾರೆ ಈ ದೇವಾಲಯದಲ್ಲಿ ಹೆಚ್ಚಾಗಿ ಬ್ರಾಹ್ಮಣರು ನೆಲೆಸಿರುವುದರಿಂದ ಲಕ್ಷ್ಮೀನಾರಾಯಣ ಅನಂತಶಯನ ದೇವಾಲಯ ನಿರ್ಮಾಣವಾಗಿರಬಹುದು. ಇದರ ನಿರ್ಮಾಣ ಲಕ್ಷಣಗಳನ್ನು ಗಮನಿಸಿದರೆ ಇದು ಕಲ್ಯಾಣಿ ಚಾಲುಕ್ಯರ ಕಾಲದ್ದಾಗಿರಬಹುದು ಎಂದು ಊಹಿಸಬಹುದು.

**ಗ್ರಾಮ : ನೀಲಗುಂದ** | **ಶೈಲಿ : ಕಲ್ಯಾಣಿ ಚಾಲುಕ್ಯ**

**ಸ್ಥಳ : ಗ್ರಾಮದ ಉತ್ತರ ದಿಕ್ಕಿಗೆ** | **ಅಭಿಮುಖ : ಪೂರ್ವಾಭಿಮುಖ**

**ಸ್ಮಾರಕ : ಮುಕ್ತಿರಾಮೇಶ್ವರ ದೇವಾಲಯ** | **ಸ್ಥಿತಿ : ಕನಿಷ್ಠ**

**ಕಾಲ : ಕ್ರಿ.ಶ.೧೧ನೇ ಶತಮಾನ** | **ಪಂಥ : ಶೈವ**

**ಸಂರಕ್ಷಣೆ : ಇಲ್ಲ**

ಈ ಮುಕ್ತಿರಾಮೇಶ್ವರ ದೇವಾಲಯದ ಹೊರಭಾಗ ಅಧಿಷ್ಠಾನ ಉಪಾನ, ಕಪೋತಗಳಿಂದ ಕೂಡಿರುತ್ತದೆ. ಸುತ್ತಲಿನ ಗೋಡೆಯ ಭಿತ್ತಿಯು ಸರಳವಾಗಿದೆ. ಮೇಲಿನ ಕಪೋತಭಾಗ ಸ್ವಲ್ಪ ಮುರಿದುಬಿದ್ದಿದೆ. ಶಿಖರವು ಕದಂಬ ನಾಗರ ಶೈಲಿಯಲ್ಲಿದ್ದು, ಈಗ ಎಂಟು ತಳಗಳು ಮತ್ತು ಶಿಖರದಲ್ಲಿ ಉಳಿದಿವೆ. ಮೇಲಿನ ಕಲಶ ಭಾಗ ನಾಶವಾಗಿದೆ. ಈ ಶಿಖರಕ್ಕೂ ಕೂಡ ಹಸಿರು ಬಳಪದ ಶಿಲೆಯನ್ನು ಬಳಸಲಾಗಿದೆ.[೨]

ದೇವಾಲಯವು ಚೌಕಾಕಾರದ ಗರ್ಭಗೃಹವನ್ನು ಹೊಂದಿದ್ದು ಇದು ೧೦x೮ ಅಡಿ ಇದೆ. ಚೌಕಾಕಾರದ ಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಇದರ ಮುಚ್ಚಿಗೆಯಲ್ಲಿ ಪದ್ಮವಿದೆ. ಗರ್ಭಗೃಹದ ದ್ವಾರವು ಅಲಂಕರಿಸದೆ. ಇರುವ ಆರು ಶಾಖೆಗಳನ್ನು ಹೊಂದಿದೆ. ಚೌಕಾಕಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯನ್ನು ಕೆತ್ತಲಾಗಿದೆ. ಆಯತಾಕಾರದ ಅಂತರಾಳವು ೮೧x೮೧ ಅಡಿ ಇದ್ದು ಶಿವಲಿಂಗದ ಎದುರಿಗೆ ನಂದಿಯ ಮೂರ್ತಿ ಇದೆ.

ಅಂತರಾಳ ದ್ವಾರದ ಸ್ತಂಭ ಶಾಖೆಯನ್ನು ಮಾತ್ರ ಅಲಂಕರಿಸಿದ್ದಾರೆ. ಉಳಿದ ಶಾಖೆಗಳನ್ನು ಏನು ಮಾಡದೇ ಹಾಗೆ ಬಿಡಲಾಗಿದೆ. ಎರಡು ಕಡೆ ಚೌಕಾಕಾರದ ಜಾಲಂಧ್ರಗಳು ಕಂಡುಬರುತ್ತವೆ.

ನವರಂಗವು ೧೯x೧೮ ಅಡಿ ಕಂಡುಬರುವುದು. ಇದರಲ್ಲಿ ನಾಲ್ಕು ಸಾಲುಗಳಲ್ಲಿ ಹದಿನಾರು ಕಂಬಗಳು ಇದ್ದು, ಇವುಗಳಲ್ಲಿ ದ್ವಾರದ ಮಧ್ಯದಲ್ಲಿ ಬರುವ ನಾಲ್ಕು ಚೌಕ ಮತ್ತು ವೃತ್ತಾಕಾರದ

ಕಂಬಗಳಿವೆ. ಉಳಿದ ಕಂಬಗಳಲ್ಲಿ ಯಾವುದೇ ರೀತಿಯ ಅಲಂಕಾರವು ಕೆತ್ತಿಲ್ಲ. ಇಲ್ಲಿನ ಬೋದಿಗೆಗಳು ಸರಳವಾಗಿದ್ದು, ಮೇಲಿನ ತೊಲೆಗಳಿಗೆ ಆಧಾರವನ್ನು ಒದಗಿಸಿವೆ. ನವರಂಗದ ದ್ವಾರ ಬಾಗಿಲಿನ ಎರಡು ಕಡೆಯಲ್ಲಿ ಮೂರು ಅಡಿ ಉತ್ತರವಿರುವ ನಾಗರ ಶಿಲ್ಪಗಳನ್ನು ನಿಲ್ಲಿಸಲಾಗಿದೆ. ಅದರ ಬಲಭಾಗದಲ್ಲಿ ಗಣೇಶ ಮೂರ್ತಿಯನ್ನು ಇಡಲಾಗಿದೆ. ಈ ದೇವಾಲಯದ ನವರಂಗದಲ್ಲಿ ಕ್ರಿ.ಶ.೧೦೭೯ರಲ್ಲಿ ಚಾಲುಕ್ಯ ರಾಜನಾದ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ದೇವಾಲಯದ ಒಳಭಾಗದಲ್ಲಿ ದಕ್ಷಿಣ ಅಭಿಮುಖವಾಗಿ ನಿಲ್ಲಿಸಿದ ಶಾಸನ ಶಿಲೆಯೊಂದನ್ನು ಕಾಣಬಹುದು. ಈ ಶಾಸನವು ಸ್ವಯಂಭೂ ರಾಮೇಶ್ವರ ದೇವರಿಗೆ ದತ್ತಿ ಬಿಟ್ಟ ದೀರ್ಘಶಾಸನವಾಗಿದೆ. ಅಲ್ಲದೆ, ಸ್ವಲ್ಪ ಮುಂಭಾಗದಲ್ಲಿ ಪೂರ್ವಾಭಿಮುಖವಾಗಿ ನಿಲ್ಲಿಸಲಾಗಿರುವ ಎರಡು ವೀರಗಲ್ಲುಗಳು ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಶಿಲ್ಪ ಮತ್ತು ರಚನೆಯ ಆಧಾರದ ಮೇಲೆ ಊಹಿಸಬಹುದು.

| | |
|---|---|
| **ಗ್ರಾಮ :** ನೀಲಗುಂದ | **ಶೈಲಿ :** ಇಲ್ಲ |
| **ಸ್ಥಳ :** ಗ್ರಾಮದ ಹಿಂಭಾಗ ಪಶ್ಚಿಮ ದಿಕ್ಕು | **ಅಭಿಮುಖ :** ಉತ್ತರಾಭಿಮುಖ |
| **ಸ್ಮಾರಕ :** ವೀರಭದ್ರೇಶ್ವರ ದೇವಾಲಯ | **ಸ್ಥಿತಿ :** ಉತ್ತಮ |
| **ಕಾಲ :** ಕ್ರಿ.ಶ.೧೨ನೇ ಶತಮಾನ | **ಪಂಥ :** ಶೈವ |
| **ಸಂರಕ್ಷಣೆ :** - | |

ಈ ದೇವಾಲಯವು ಗರ್ಭಗೃಹ, ತೆರೆದ ಸಭಾಮಂಟಪವನ್ನು ಹೊಂದಿದೆ. ಈ ದೇವಾಲಯವು ಸ್ಥಳೀಯ ಶೈಲಿಯನ್ನು ಹೊಂದಿದೆ. ಅಂದರೆ ૩೦ ವರ್ಷಗಳ ಹಿಂದೆ ಈ ದೇವಾಲಯ ಜೀರ್ಣೋದ್ಧಾರ ಹೊಂದಿದೆ. ಮೊದಲು ಇರುವ ಬಳಪದ ಕಲ್ಲುಗಳ ಅವಶೇಷಗಳು ಆ ಸ್ಥಳದಲ್ಲಿ ಕಾಣಬಹುದು.

ಈ ದೇವಾಲಯ ಚೌಕಾಕಾರವಾಗಿದೆ. ಗರ್ಭಗೃಹದಲ್ಲಿ ೭x೭ ಅಡಿ ಇದ್ದು, ಚೌಕಾಕಾರದ ಪೀಠದ ಮೇಲೆ ವೀರಭದ್ರೇಶ್ವರ ದೇವರ ವಿಗ್ರಹವಿದೆ. ಇದರ ಮುಚ್ಚಿಗೆಯಲ್ಲಿ ಪದ್ಮವಿದೆ. ಗರ್ಭಗೃಹದ ದ್ವಾರವನ್ನು ಸ್ವಲ್ಪಮಟ್ಟಿಗೆ ಅಲಂಕರಿಸಲಾಗಿದೆ. ತೆರೆದ ಸಭಾಮಂಟಪವು ೨೦x೧೦ ಅಡಿ ಇದ್ದು, ಇದು ೧೨ ಕಂಬಗಳನ್ನು ಹೊಂದಿದೆ. ದೇವಾಲಯದ ಒಳಭಾಗದಲ್ಲಿ ಒಂದು ಗಣೇಶಮೂರ್ತಿ ಹಾಗೂ ವೀರಭದ್ರೇಶ್ವರ ಮೂರ್ತಿಯನ್ನು ಕಾಣಬಹುದು. ಈ ದೇವಾಲಯ ಗೋಡೆಯ ಮುಂಭಾಗದಲ್ಲಿ ತ್ರುಟಿತವಾದ ಶಾಸನವನ್ನು ಕಾಣಬಹುದು. ಅಲ್ಲದೆ ಪಕ್ಕದಲ್ಲಿ ಮೂರು ನಾಗರ ಶಿಲ್ಪವನ್ನು ನಿಲ್ಲಿಸಲಾಗಿದೆ.

ಅಲ್ಲದೆ ಈ ದೇವಾಲಯವು ಮುಂಭಾಗದಲ್ಲಿ ಸುಮಾರು ೧೨ ಅಡಿ ಎತ್ತರವಿರುವ ಗರುಡ ಗಂಬವನ್ನು ಹೊಂದಿದೆ. ಅಲ್ಲದೆ, ಸ್ವಲ್ಪ ಮುಂದೆ ಬಂದರೆ, ಆಂಜನೇಯ ದೇವಾಲಯವನ್ನು ಕಾಣಬಹುದು. ಸುಮಾರು ೫ ಅಡಿ ಎತ್ತರವಿದ್ದು, ಬಹಳ ಸುಂದರ ರೀತಿಯಲ್ಲಿ ಆಂಜನೇಯ ಮೂರ್ತಿಯನ್ನು ಕೆತ್ತಲಾಗಿರುವುದನ್ನು ನೋಡಬಹುದು. ಮುಂಭಾಗದಲ್ಲಿ ४ ಅಡಿ ಎತ್ತರದ ಗರುಡ ಗಂಬವನ್ನು ನಿಲ್ಲಿಸಲಾಗಿದೆ. ಪಕ್ಕದಲ್ಲಿ ಬನ್ನಿ ಮರವಿದೆ. ಈ ದೇವಾಲಯದ ಆವರಣವು ಬಹಳ ವಿಶಾಲವಾಗಿದೆ.

ಗ್ರಾಮ : ಕುಂಚೂರು

ಸ್ಥಳ : ಗ್ರಾಮದಿಂದ ದಕ್ಷಿಣಕ್ಕೆ ೨ ಕಿ.ಮೀ

ಸ್ಮಾರಕ : ಕಲ್ಲೇಶ್ವರ ದೇವಾಲಯ

ಕಾಲ : ಕ್ರಿ.ಶ.೧೧ನೇ ಶತಮಾನ

ಸಂರಕ್ಷಣೆ : -

ಶೈಲಿ : ಕಲ್ಯಾಣಿ ಚಾಲುಕ್ಯ

ಅಭಿಮುಖ : ಪೂರ್ವಾಭಿಮುಖ

ಸ್ಥಿತಿ : ಕನಿಷ್ಠ

ಪಂಥ : ಶೈವ

ಈ ದೇವಾಲಯ ಗರ್ಭಗುಡಿ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ದೇವಾಲಯವು ಹೊರಭಾಗದಲ್ಲಿ ಅಧಿಷ್ಠಾನ, ಉಪಾನ, ಕಪೋತಗಳಿಂದ ಕೂಡಿದೆ. ಭಿತ್ತಿಯು ಸರಳವಾಗಿದೆ. ಪ್ರಸ್ತರ ಭಾಗ ಸ್ವಲ್ಪ ಶಿಥಿಲಗೊಂಡಿದೆ. ಗ್ರೀವ ಮತ್ತು ಶಿಖರ ನಾಶವಾಗಿದೆ. ಅಂದರೆ ಮೇಲಿನ ಭಾಗ ನಾಶವಾಗಿದೆ.

ಚೌಕಾಕಾರದ ಗರ್ಭಗೃಹದಲ್ಲಿ ೧೧x೮೧ ಅಡಿಯ. ಶಿವಲಿಂಗವನ್ನು ಪ್ರತಿಷ್ಠಾಪನೆ ಮಾಡಿದ್ದಾರೆ. ಇದರ ಮುಚ್ಚಿಗೆಯಲ್ಲಿ ಪದ್ಮವಿದೆ. ಗರ್ಭಗೃಹದ ದ್ವಾರದಲ್ಲಿ ಅಲಂಕಾರ ಕಂಡುಬರುವುದಿಲ್ಲ. ಚೌಕಾಕಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯನ್ನು ಕೆತ್ತಲಾಗಿದೆ. ಆಯತಾಕಾರದ ಅಂತರಾಳ ೭೧x೮೧ ಅಡಿ ಹೊಂದಿದೆ. ನವರಂಗವು ೨೦x೨೨ ವಿಶಾಲತೆಯನ್ನು ಹೊಂದಿದೆ. ಇದರಲ್ಲಿ ಚೌಕಾಕಾರದ ನಾಲ್ಕು ಕಂಬಗಳನ್ನು ಕಾಣಬಹುದು. ಇವು ಕುಂಭದ ಆಕಾರದ ರಚನೆಯಾಗಿದೆ. ಉಳಿದ ಕಂಬಗಳು ಸರಳವಾಗಿವೆ. ಈ ಕಂಬಗಳಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಸ್ವಲ್ಪ ಮುಂಭಾಗದಲ್ಲಿ ನಂದಿವಿಗ್ರಹವನ್ನು ಕಾಣಬಹುದು. ಅದರ ಪಕ್ಕದಲ್ಲಿ ಭಗ್ನಗೊಂಡ ಗಣಪತಿಯ ಮೂರ್ತಿ ಇದೆ. ದೇವಾಲಯದ ಒಳಭಾಗದಲ್ಲಿ ಸಪ್ತ ಮಾತೃಕೆಯ ಫಲಕವು ಉತ್ತರ ಅಭಿಮುಖವಾಗಿರುವುದು ಕಂಡುಬರುತ್ತದೆ.

ಈ ದೇವಾಲಯದಲ್ಲಿ ನಾಗಶಿಲ್ಪಗಳಿವೆ. ಅಲ್ಲದೆ ಚೌಕಾಕಾರದ ಕಂಬದಲ್ಲಿ ಯಾದವ ದೊರೆಯಾದ ರಾಮಚಂದ್ರದೇವನ ಕಾಲದ ಶಾಸನ ಕಾಣಬಹುದು. ಈ ದೇವಾಲಯದ ಬಲಭಾಗದಲ್ಲಿ ಸುಮಾರು ೬ ವೀರಗಲ್ಲುಗಳ ಗುಂಪು ಕಂಡುಬರುತ್ತದೆ. ಅಲ್ಲದೆ ದೇವಾಲಯದ ಮುಂದೆ ದೊಡ್ಡದಾದ ಹೊಂಡವನ್ನು ಕಾಣಬಹುದು. ಈ ಎಲ್ಲ ಲಕ್ಷಣಗಳನ್ನು ಗಮನಿಸಲಾಗಿದೆ. ಈ ದೇವಾಲಯವು ಕಲ್ಯಾಣಿ ಚಾಲುಕ್ಯರ ನಿರ್ಮಾಣವಾಗಿರಬಹುದೆಂದು ಊಹಿಸಲಾಗಿದೆ.

ಗ್ರಾಮ : ಕುಂಚೂರು

ಸ್ಥಳ : ಗ್ರಾಮದಿಂದ ದಕ್ಷಿಣಕ್ಕೆ ೨ ಕಿ.ಮೀ

ಸ್ಮಾರಕ : ಆಂಜನೇಯ ದೇವಾಲಯ

ಕಾಲ : ಕ್ರಿ.ಶ.೧೨ನೇ ಶತಮಾನ

ಸಂರಕ್ಷಣೆ : -

ಶೈಲಿ : ಕಲ್ಯಾಣಿ ಚಾಲುಕ್ಯ

ಅಭಿಮುಖ : ದಕ್ಷಿಣಾಭಿಮುಖ

ಸ್ಥಿತಿ : ಕನಿಷ್ಠ

ಪಂಥ : ಶೈವ

ಈ ದೇವಾಲಯವು ಗರ್ಭಗೃಹ ಮತ್ತು ತೆರೆದ ನವರಂಗವನ್ನು ಹೊಂದಿದೆ. ದೇವಾಲಯದಲ್ಲಿ(ಭಿತ್ತಿ) ಅಧಿಷ್ಠಾನ ಇದ್ದು; ಭಿತ್ತಿಯು ಸರಳವಾಗಿದೆ. ಬಿತ್ತಿಯ ಮೇಲಿನ ಪ್ರಸ್ತರ ಭಾಗ ಸ್ವಲ್ಪ ನಾಶವಾಗಿದೆ.

ಶಿಖರವು ಕಂಡುಬರುವುದಿಲ್ಲ. ನಾಲ್ಕು ಚೌಕಾಕಾರದ ಕಂಬಗಳಿದ್ದು ಮೇಲಿನ ಬೋದಿಗೆಗಳು ಸರಳವಾದ ರೀತಿಯಲ್ಲಿ ರಚನೆಗೊಂಡಿದೆ. ಈ ದೇವಾಲಯದಲ್ಲಿ ಬಳಪದದ ಕಲ್ಲನ್ನು ಬಳಸಲಾಗಿದೆ.

ಚೌಕಾಕಾರ ಗರ್ಭಗೃಹವು ೧೫x೧೩ ಅಡಿ ಇದ್ದು ಅಲ್ಲಿ ಆಂಜನೇಯ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಈ ಮೂರ್ತಿಯು ಸುಂದರವಾಗಿದೆ. ಈ ದೇವಾಲಯವು ನವರಂಗದಲ್ಲಿ ೧೨ ಕಂಬಗಳನ್ನು ಹೊಂದಿದ್ದು ಒಂದು ಕಂಬದಲ್ಲಿ ಶಾಸನವನ್ನು ಕೆತ್ತಲಾಗಿದೆ. ಈ ಶಾಸನವು ವೀರರಾಮಚಂದ್ರನ ಕಾಲದಲ್ಲಿ ಕಲ್ಲೇಶ್ವರ ದೇವರಿಗೆ ದಾನ ನೀಡಿದ ಉಲ್ಲೇಖ ಕಂಡುಬರುತ್ತದೆ. ಒಳಭಾಗದಲ್ಲಿ ನಾಗರ ಶಿಲ್ಪ ನಿಲ್ಲಿಸಲಾಗಿದೆ..

ಈ ದೇವಾಲಯದ ಮುಂಭಾಗದಲ್ಲಿ ಸುಮಾರು ೧೦ ಅಡಿ ಎತ್ತರದ ಗರುಡ ಕಂಬವನ್ನು ನಿಲ್ಲಿಸಲಾಗಿದೆ. ಆ ಕಂಬದಲ್ಲಿ ೪ ಅಡಿ ಅಗಲವಿರುವ ಗಜಲಕ್ಷ್ಮಿ ಶಿಲ್ಪವನ್ನು ಇಡಲಾಗಿದೆ. ಮುಂದೆ ಸ್ವಲ್ಪ ಓಕುಳಿ ಹೊಂಡವನ್ನು ಹೊಂದಿದೆ. ದೇವಾಲಯದ ಪಕ್ಕ ಕಂಬಗಳು, ಬಿದ್ದಿರುವುದನ್ನು ಗಮನಿಸಿದ್ದರೆ, ಯಾವುದೋ ದೇವಾಲಯ ನಾಶವಾಗಿರಬಹುದೆಂದು ಊಹಿಸಲಾಗಿದೆ. ಅದರ ಮುಂದೆ ಸುಮಾರು ೫೦೦ ಎಕರೆಯ ಕೆರೆಯನ್ನು ನಿರ್ಮಿಸಲಾಗಿದೆ. ಇದನ್ನು ಗಮನಿಸಿದರೆ ಕಲ್ಯಾಣಿ ಚಾಲುಕ್ಯರ ಅವಧಿಯಲ್ಲಿ ಈ ದೇವಾಲಯವು ನಿರ್ಮಾಣವಾಗಿರಬಹುದೆಂದು ಊಹಿಸಲಾಗಿದೆ.

| | |
|---|---|
| ಗ್ರಾಮ : ಕುಂಚೂರು | ಶೈಲಿ : ಕಲ್ಯಾಣಿ ಚಾಲುಕ್ಯ |
| ಸ್ಥಳ : ಗ್ರಾಮದಿಂದ ಅರ್ಧ ಕಿ.ಮೀ. ಉತ್ತರಕ್ಕೆ | ಅಭಿಮುಖ : ಪೂರ್ವಾಭಿಮುಖ |
| ಸ್ಮಾರಕ : ಮಲ್ಲಿಕಾರ್ಜುನ ದೇವಾಲಯ | ಸ್ಥಿತಿ : ಉತ್ತಮ |
| ಕಾಲ : ಕ್ರಿ.ಶ.೧೨ನೇ ಶತಮಾನ | ಪಂಥ : ಶೈವ |
| ಸಂರಕ್ಷಣೆ : - | |

ಈ ದೇವಾಲಯದ ಗರ್ಭಗೃಹವು ೧೦x೮ ಅಡಿ ಇದ್ದು, ಅಂತರಾಳವನ್ನು ೭x೮ ಅಡಿ ವಿಸ್ತೀರ್ಣ ಹೊಂದಿದೆ. ಈ ದೇವಾಲಯವು ಆಧುನಿಕ ಯುಗದಲ್ಲಿ ಜೀರ್ಣೋದ್ಧಾರವನ್ನು ಹೊಂದಿದೆ. ಗರ್ಭಗೃಹದಲ್ಲಿ ಚೌಕಾಕಾರದ ಗೃಹವನ್ನು ಹೊಂದಿದೆ. ಚೌಕಾಕಾರದ ಪೀಠದ ಮೇಲೆ ಶಿವಲಿಂಗ ಇದೆ. ಅದರ ಮುಚ್ಚಿಗೆಯಲ್ಲಿ ಪದ್ಮವಿದೆ. ಗರ್ಭಗೃಹದ ದ್ವಾರದಲ್ಲಿ ಅಲಂಕಾರವು ಕಂಡುಬರುವುದಿಲ್ಲ. ಆಯತಾಕಾರದ ಅಂತಾರಳವಿದ್ದು ಅದರಲ್ಲಿ ನಂದಿಯ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ವಿಶಾಲವಾದ ಅವರಣವನ್ನು ಹೊಂದಿದ್ದು, ಈ ದೇವಾಲಯ ಹೊರಭಾಗದಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಆದರೆ ಬಲಭಾಗದಲ್ಲಿ ಒಂದು ದೊಡ್ಡ ಶಾಸನವನ್ನು ಕಾಣಬಹುದುದಾಗಿದೆ. ಆ ಶಾಸನ ಸುಮಾರು ೩೮ ಸಾಲುಗಳನ್ನು ಹೊಂದಿದೆ. ಇದರಲ್ಲಿ ಚಾಲುಕ್ಯರಾಜ ತ್ರಿಭುವನ ಮಲ್ಲಿದೇವ ಮತ್ತು ಮಹಾಮಂಡಳೇಶ್ವರ ತ್ರಿಭುವನಮಲ್ಲ ವೀರ ಪಾಂಡ್ಯದೇವರು ಆಳುತ್ತಿದ್ದರೆಂದು ಉಲ್ಲೇಖಿಸುವುದರಿಂದ ಈ ದೇವಾಲಯವು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಹೇಳಲಾಗಿದೆ.

ಗ್ರಾಮ : ಹಲುವಾಗಲು

ಸ್ಥಳ : ಗ್ರಾಮದ ಕೋಟೆಯ ಮಧ್ಯದಲ್ಲಿ

ಸ್ಮಾರಕ : ಕಲ್ಲೇಶ್ವರ ದೇವಾಲಯ

ಕಾಲ : ಕ್ರಿ.ಶ.೧೧ನೇ ಶತಮಾನ[೨೩]

ಸಂರಕ್ಷಣೆ : ಪುರಾತತ್ವ ಇಲಾಖೆ

ಶೈಲಿ : ಕಲ್ಯಾಣಿ ಚಾಲುಕ್ಯ

ಅಭಿಮುಖ : ಪೂರ್ವಾಭಿಮುಖ

ಸ್ಥಿತಿ : ಮಧ್ಯಮ

ಪಂಥ : ಶೈವ

ಕಲ್ಲೇಶ್ವರ ದೇವಾಲಯವು ಗರ್ಭಗುಡಿ, ತೆರೆದ ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಪ್ರವೇಶ ದ್ವಾರವು ದಕ್ಷಿಣಕ್ಕೆ ಇದೆ. ಅದಿಷ್ಠಾನವು ಉಪಾನ ಪದ್ಮಗಳಿಂದ ಕೂಡಿದೆ. ಮೊದಲು ಭಿತ್ತಿಯ ಭಾಗವು ಸಂಪೂರ್ಣ ನಾಶಹೊಂದಿದ್ದು, ಕ್ರಿ.ಶ.೧೯೫೦ರಲ್ಲಿ ಆ ಗ್ರಾಮ ಪುರಾತತ್ವ ಇಲಾಖೆಯವರು ಭಿತ್ತಿಯ ಎಲ್ಲ ಭಾಗವನ್ನು ಇತ್ತೀಚೆಗೆ ಆ ಪರಿಸರದಲ್ಲಿ ದೊರೆಯುತ್ತಿರುವ ಗ್ರಾನೈಟ್ ಕಲ್ಲುಗಳಿಂದ ಈ ದೇವಾಲಯವನ್ನು ನವೀಕರಣ ಮಾಡಿರುವರು. ಪ್ರಸ್ತರದಲ್ಲಿ ಕಪೋತ ಭಾಗ ಹಾಗೂ ಶಿಖರದ ಯಾವುದೇ ಭಾಗವು ಕಂಡುಬರುವುದಿಲ್ಲ.[೨೪]

ಈ ದೇವಾಲಯದಲ್ಲಿ ಚೌಕಾಕಾರವಾಗಿರುವ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಇದರ ಸ್ವಲ್ಪ ಮುಂದೆ ನಂದಿಯು ಇದೆ. ಗರ್ಭಗುಡಿಯಲ್ಲಿ ದ್ವಾರವು ಸರಳ ರೀತಿಯ ಐದು ಶಾಖೆಗಳನ್ನು ಹೊಂದಿದೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಗರ್ಭಗುಡಿಯ ಮುಂದೆ ತೆರೆದ ಅಂತರಾಳ ೮x೮ ಅಡಿ ಇದ್ದು, ಅದು ಆಯತಾಕಾರವಾಗಿದೆ. ನವರಂಗದ ಪೂರ್ವಭಾಗದಲ್ಲಿ ಎರಡು ಚಿಕ್ಕ ನಂದಿ ವಿಗ್ರಹಗಳಿವೆ. ಹಾಗೂ ಕೆಲವು ನಾಗರಶಿಲ್ಪಗಳಿವೆ ಇವುಗಳ ಪಕ್ಕದಲ್ಲಿ ಸುಮಾರು ೯ ಅಡಿ ಎತ್ತರವಿರುವ ಶಾಸನವನ್ನು ನಿಲ್ಲಿಸಲಾಗಿದೆ.

ನವರಂಗವು ೨೫ x ೩೦ ಅಡಿ ಇದ್ದು, ಉತ್ತರ ಭಾಗದಲ್ಲಿ ಆಯತಾಕಾರವಾಗಿರುವ ಗರ್ಭಗುಡಿಯೊಂದಿದೆ. ಇದರಲ್ಲಿ ಕೇಶವಮೂರ್ತಿ(ವಿಷ್ಣು) ಇದೆ. ಇದರ ಮುಂಭಾಗದಲ್ಲಿ ನಾಲ್ಕು ಚೌಕಾಕಾರದ ಸುಂದರ ಕಂಬಗಳು ನವರಂಗದಲ್ಲಿವೆ. ಈ ಚೌಕಾಕಾರ ಕಂಬಗಳ ಭಾಗವು ಮಣಿಸರಗಳಂತೆ ಅಲಂಕೃತವಾಗಿವೆ. ಇದರಲ್ಲಿ ವಿಜಯನಗರ ಸಾಮ್ರಾಜದ ಬುಕ್ಕರಾಯನ ಕಾಲದ ಶಾಸನದ ಉಲ್ಲೇಖವಿದೆ. ಈ ಚೌಕಾಕಾರದ ಕಂಬದ ಮೇಲಿನ ಬೋದಿಗೆಯು ಸರಳವಾಗಿವೆ. ಇದರ ಮುಚ್ಚಿಗೆಯಲ್ಲಿ ಪದ್ಮವಿದೆ. ಇದರ ಪೂರ್ವಭಾಗದ ಭಿತ್ತಿಯಲ್ಲಿ ಸಣ್ಣ ಚೌಕಾಕಾರದ ಜಾಲಂಧ್ರಗಳಿವೆ.[೨೫]

ಗರ್ಭಗುಡಿಯ ದ್ವಾರವಿರುವಂತೆ (ಪ್ರದೇಶ) ದಕ್ಷಿಣ ಪ್ರವೇಶ ದ್ವಾರವು ಐದು ಶಾಖೆಗಳಿಂದ ಅಲಂಕೃತಗೊಂಡಿಲ್ಲ. ಇದರ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಲಕ್ಷ್ಮಿಯ ಅಕ್ಕಪಕ್ಕದಲ್ಲಿದ್ದ ಎರಡು ಆನೆಗಳು ತನ್ನ ಹಿಂಗಾಲಿನಿಂದ ತನ್ನ ಭಾರ ಹೊತ್ತುನಿಂತು, ತನ್ನ ಎರಡು ಮುಂಗಾಲನ್ನು ಮೆಲಕ್ಕೆತ್ತಿ ಸೊಂಡಿಲುಗಳನ್ನು ಬಾಯೊಳಕ್ಕೆ ಸೇರಿಸಿಕೊಂಡು ನಿಂತಿರುವುದು ಒಂದು ವಿಶೇಷವೆನ್ನಬಹುದು. ಈ ದೇವಾಲಯದ ಮುಂಭಾಗದಲ್ಲಿ ಎರಡು ತ್ರುಟಿತಗೊಂಡಿರುವ ವೀರಗಲ್ಲುಗಳಿವೆ. ಈ ದೇವಾಲಯ

ಭಿತ್ತಿಯ ಹೊರಭಾಗದಲ್ಲಿ ಸುಮಾರು ಆರು ಅಡಿ ಎತ್ತರದ, ಎರಡು ವೀರಗಲ್ಲುಗಳಿವೆ. ಇದರಲ್ಲಿ ಕುದುರೆಯನ್ನೇರಿ ಶತ್ರು ಪಡೆಯೊಂದಿಗೆ ಹೋರಾಡುತ್ತಿರುವ ವೀರಗಲ್ಲುಗಳಿವೆ.

**ಗ್ರಾಮ : ಚಿರಸ್ತಹಳ್ಳಿ** | **ಶೈಲಿ : ಕಲ್ಯಾಣಿ ಚಾಲುಕ್ಯ**

**ಸ್ಥಳ : ಗ್ರಾಮದ ಉತ್ತರಕ್ಕೆ** | **ಅಭಿಮುಖ : ಪೂರ್ವಾಭಿಮುಖ**

**ಸ್ಮಾರಕ : ಕಲ್ಲೇಶ್ವರ ದೇವಾಲಯ** | **ಸ್ಥಿತಿ : ಕನಿಷ್ಠ**

**ಕಾಲ : ಕ್ರಿ.ಶ.೧೧ನೇ ಶತಮಾನ** | **ಪಂಥ : ಶೈವ**

**ಸಂರಕ್ಷಣೆ : -**

ಈ ದೇವಾಲಯವು ಗರ್ಭ ಮತ್ತು ತೆರೆದ ನವರಂಗದಿಂದ ಕೂಡಿದೆ. ಕಲ್ಲೇಶ್ವರ ದೇವಾಲಯವು ಅಧಿಷ್ಠಾನ ಉಪಾನ, ಕಪೋತಗಳಿಂದ ಕೂಡಿರುತ್ತದೆ. ಸುತ್ತಲಿನ ಗೋಡೆಯ ಭಿತ್ತಿಯು ಸರಳವಾಗಿದೆ. ಈ ದೇವಾಲಯ ಗ್ರಾಮಸ್ಥರಿಂದ ಜೀರ್ಣೋದ್ಧಾರ ಹೊಂದಿದೆ. ಈಗ ಸ್ಥಳೀಯ ಶೈಲಿಯನ್ನು ಈಗ ಹೊಂದಿದೆ. ಶಿಖರವನ್ನು ನಿರ್ಮಾಣ ಮಾಡಿಲ್ಲ. ಇದಕ್ಕೆ ಹೆಚ್ಚಾಗಿ ಹಳೆಯ ಶಿಲೆಯನ್ನು ಬಳಸಿದ್ದಾರೆ.

ಚೌಕಾಕಾರದ ಗರ್ಭಗೃಹ ಹೊಂದಿದ್ದು, ಇದು ೮x೮ ಅಡಿ ಇದೆ. ಇದರಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಇದರ ಮುಚ್ಚಿಕೆಯಲ್ಲಿ ಪದ್ಮವಿದೆ. ಗರ್ಭಗೃಹದ ದ್ವಾರವು ಅಲಂಕರಿಸದ್ದೇ ಇರುವ ಎರಡು ಶಾಖೆಗಳನ್ನು ಹೊಂದಿದೆ. ನವರಂಗದಲ್ಲಿ ಶಿವಲಿಂಗದ ಎದುರಿಗೆ ನಂದಿಮೂರ್ತಿ ಇದೆ.

ಈ ದೇವಾಲಯದ ಮುಂಭಾಗದಲ್ಲಿ ಎರಡು ಬದಿಗಳಲ್ಲಿ ವೀರಗಲ್ಲುಗಳನ್ನು ಕಾಣಬಹುದು. ಆದರೆ ಶಿಥಿಲವನ್ನು ಹೊಂದಿವೆ. ಅಲ್ಲದೆ ಬಲಭಾಗದಲ್ಲಿ ಬಹಳ ಸುಂದರ ವೀರಗಲ್ಲನ್ನು ಕಾಣಬಹುದು. ಈ ದೇವಾಲಯ ಗೋಡೆಗೆ ಸುಮಾರು ಹದಿಮೂರು ನಾಗರ ಶಿಲ್ಪಗಳನ್ನು ನಿಲ್ಲಿಸಿರುವುದು ಕಂಡುಬರುತ್ತದೆ. ಇದರ ಮುಂಭಾಗದಲ್ಲಿ ದೇವಾಲಯದ ಕೆಲವು ಅವಶೇಷಗಳು ಬಿದ್ದಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಹೇಳುವುದಾದರೆ ಈ ದೇವಾಲಯವು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಊಹಿಸಲಾಗಿದೆ.

**ಗ್ರಾಮ : ಚಿರಸ್ತಹಳ್ಳಿ** | **ಶೈಲಿ : ರಾಷ್ಟ್ರಕೂಟರು**

**ಸ್ಥಳ : ಗ್ರಾಮದ ಪಶ್ಚಿಮಕ್ಕೆ ೧ ಕಿ.ಮೀ** | **ಅಭಿಮುಖ : ಪೂರ್ವಾಭಿಮುಖ**

**ಸ್ಮಾರಕ : ಶಂಕರಲಿಂಗ ದೇವಾಲಯ** | **ಸ್ಥಿತಿ : ಕನಿಷ್ಠ**

**ಕಾಲ : ಕ್ರಿ.ಶ.೧೦ನೇ ಶತಮಾನ** | **ಪಂಥ : ಶೈವ**

**ಸಂರಕ್ಷಣೆ : -**

ಈ ದೇವಾಲಯವು ೧೫ ಅಡಿ ಉದ್ದ, ೧೫ ಅಡಿ ಅಗಲವಿರುವ ಗರ್ಭಗೃಹವನ್ನು ಹೊಂದಿದೆ. ಹೊರಭಾಗದಲ್ಲಿ ಅಧಿಷ್ಠಾನ ಹೊಂದಿದ್ದು, ಸ್ವಲ್ಪ ಮಟ್ಟಿನ ಭಿತ್ತಿಯನ್ನು ಹೊಂದಿದೆ. ಇದರ ಮೇಲಿನ

ಪ್ರಸ್ತರ ಭಾಗವು ಸಂಪೂರ್ಣ ನಾಶವಾಗಿದೆ. ಭಿತ್ತಿಯ ಭಾಗವನ್ನೇ ಸ್ಥಳೀಯರು ಜೀರ್ಣೋದ್ಧಾರ ಮಾಡಿದಂತೆ ಕಾಣುತ್ತದೆ.

ಗರ್ಭಗೃಹವು ೧೫ x ೧೫ ಅಡಿ ಇದೆ. ಶಿವಲಿಂಗವನ್ನು ಪ್ರತಿಷ್ಠಾಪನೆ ಮಾಡಿದ್ದಾರೆ. ಇದರ ಸ್ವಲ್ಪ ಮುಂಭಾಗದಲ್ಲಿ ಎದುರಿಗೆ ನಂದಿ ವಿಗ್ರಹವನ್ನು ಇಡಲಾಗಿದೆ. ಗರ್ಭಗೃಹದ ಒಳಭಾಗದಲ್ಲಿ ಯಾವುದೇ ಮೂರ್ತಿ ಶಿಲ್ಪಗಳು ಕಂಡುಬರುವುದಿಲ್ಲ. ಅಂದರೆ ಪ್ರಾರಂಭದಲ್ಲಿ ಇದ್ದ ಸ್ತಂಭಗಳು ಒಳಭಾಗದ ಲಿಂಗದ ಎದುರಿಗೆ ನಾಲ್ಕು ಕಂಬಗಳನ್ನು ಕಂಡುಬರುತ್ತದೆ.

ಈ ದೇವಾಲಯ ಮುಂಭಾಗದಲ್ಲಿ ಚಾಲುಕ್ಯರಾಜ ತ್ರೈಲೋಕ್ಯ ಮಲ್ಲದೇವನ ಆಡಳಿತ ಅವಧಿಯಲ್ಲಿ ಶಂಕರಲಿಂಗ ದೇವಾಲಯಕ್ಕೆ ದಾನ ನೀಡಿರುವ ಉಲ್ಲೇಖವಿದೆ. ಅಲ್ಲದೆ ಇನ್ನೊಂದು ವೀರಗಲ್ಲನ್ನು ನಿಲ್ಲಿಸಲಾಗಿದೆ. ಇದರಲ್ಲಿ ವೀರನು ಹೋರಾಡಿ ಮಡಿದ ಮತ್ತು ಇವನ ಕುಟುಂಬಕ್ಕೆ ದಾನ ನೀಡಿದ ಉಲ್ಲೇಖವಿದೆ. ಇನ್ನೊಂದು ಗೋಶಾಸನದ ಎಲ್ಲ ಲಕ್ಷಣಗಳನ್ನು ಅಧ್ಯಯನ ಮಾಡಿದಾಗ ಇದು ರಾಷ್ಟ್ರಕೂಟರ ಆಡಳಿತ ಅವಧಿಯಲ್ಲಿ ನಿರ್ಮಾಣವಾಗಿರಬಹುದೆಂದು ಊಹಿಸಲಾಗಿದೆ.

ಒಟ್ಟಾರೆಯಾಗಿ ನೀಲಗುಂದ ಪರಿಸರದಲ್ಲಿ ಕಂಡುಬರುವ ಭೀಮೇಶ್ವರ ದೇವಾಲಯ, ಲಕ್ಷ್ಮೀನಾರಾಯಣ ದೇವಾಲಯ, ಕಲ್ಲೇಶ್ವರ, ಮಲ್ಲಿಕಾರ್ಜುನ ಈ ದೇವಾಲಯಗಳ ವಾಸ್ತು ವಿನ್ಯಾಸವನ್ನು ಕುರಿತು ಮೇಲ್ಕಾಣಿಸಿದಂತೆ ಅಧ್ಯಯನ ಮಾಡಲಾಗಿದೆ.

## ೪.೨. ಮೂರ್ತಿಶಿಲ್ಪ

ಭಾರತದಲ್ಲಿ ದೇವತಾರಾಧನೆ ಹಾಗೂ ವ್ಯವಸ್ಥಿತ ದೇವಾಲಯಗಳ ನಿರ್ಮಾಣ ಎಂದಿನಿಂದ ಆರಂಭವಾಯಿತೋ ಅಂದಿನಿಂದಲೂ ದೇವತಾ ಮೂರ್ತಿಗಳ ಪ್ರತಿಷ್ಠಾಪನೆ ಮತ್ತು ಆರಾಧನೆ ನಡೆಯುತ್ತಲೇ ಇದೆ. ಯಾವುದೇ ಪಂಥದ ದೇವಾಲಯವಿರಲಿ, ಈ ದೇವಾಲಯಕ್ಕೊಂದು ದೇವತಾಮೂರ್ತಿ ಇದ್ದೇ ಇರುತ್ತದೆ. ಈ ರೀತಿಯ ಮೂರ್ತಿಗಳ ಕುರಿತು ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ಶಾಸ್ತ್ರವನ್ನು ನಾವು ಸ್ಥೂಲವಾಗಿ 'ಮೂರ್ತಿಶಿಲ್ಪ' ಎಂದು ಕರೆಯುತ್ತೇವೆ.[೨೬]

ಮೂರ್ತಿ ಎಂಬ ಪದಕ್ಕೆ ಸಮರ್ಥವಾಗಿ 'ಪ್ರತಿಮೆ' ಎಂಬ ಪದದ ಪ್ರಯೋಗವಾಗಿದೆ. ಅಲ್ಲದೆ ಮೂರ್ತಿಶಾಸ್ತ್ರವನ್ನು 'ಪ್ರತಿಮಾ ಶಾಸ್ತ್ರ' ಎಂದೂ ಕರೆಯಲಾಗುತ್ತದೆ.[೨೭] ಪ್ರತಿಮಾ ಲಕ್ಷಣವೆಂದರೆ ಒಂದು ದೇವತೆಯ ಲಕ್ಷಣಗಳನ್ನು ಮೂರ್ತಿ ರೂಪದಲ್ಲಿ ಪ್ರಮಾಣಬದ್ಧವಾಗಿ ಹೇಗೆ ಹಿಡಿಯಬೇಕೆಂಬುದನ್ನು ತಿಳಿಸುವ ಶಾಸ್ತ್ರ. ಶಾಸ್ತ್ರೀಯ ನಿರೂಪಣೆಯ ಪ್ರಕಾರ ಮೂರ್ತಿಯು ಒಂದು ರೂಪ ಒಂಬತ್ತು ಅಂಗಗಳನ್ನು ಒಳಗೊಂಡಿರುತ್ತದೆ. ಅವುಗಳೆಂದರೆ, ನ್ಯಾಸ(ರೂಪ), ಅಲಂಕಾರ (ಅಭರಣ, ವಸ್ತು, ಕೇಶ), ಮುದ್ರಾ (ಹಸ್ತ ಮುದ್ರೆ), ಆಯುಧ (ದೇವತೆಗಳ ಕೈಯಲ್ಲಿರುವ ಆಯುಧಗಳು), ಬಾಹ್ಯು ಕಷ (ಆಸನ),

ವಾಹನ, ಉಪದೇವ, (ಪ್ರಧಾನ ದೇವತೆಯ ಜತೆ ತೋರಿಸಲ್ಪಡುವ ಇತರ ಕಡಿಮೆ ಮಹತ್ವದ ದೇವತೆಗಳು ಪುರುಷ ದೇವತೆಗಳ ಸಂದರ್ಭದಲ್ಲಿ ಅವರ ಸ್ತ್ರೀ ದೇವತೆಗಳು) ಅರಿ (ದೇವತೆಯ ವೈರಿ) ಹಾಗೂ ಸ್ತುವಕ. ಈ ಶಾಸ್ತ್ರೀಯ ಸಂಪ್ರದಾಯಕ್ಕೆ ಅನುಗುಣವಾಗಿಯೇ ದೇವತಾಮೂರ್ತಿಗಳು ರೂಪಗೊಳ್ಳುತ್ತವೆ.[೨೮]

ದೇವಾಲಯ ಎಂದರೆ ದೇವ + ಆಲಯ, ದೇವರಿಗಾಗಿ ಕಟ್ಟಿಸಲ್ಪಟ್ಟ ಮಂದಿರ ಎಂದರ್ಥ. ದೇವರು ಎಂಬ ಪದದ ವಿಕಾಸ ರೂಪವನ್ನು ಮೂರ್ತಿಶಿಲ್ಪಗಳ ಪ್ರತಿಮೆಗಳಲ್ಲಿ ಕಾಣಬಹುದು. ನಮ್ಮ ದೇಶದ ದೇವತಾಮೂರ್ತಿಗಳಲ್ಲಿ ಎದ್ದು ಕಾಣುವುದು. ಅಪ್ರಾಕೃತ ಮತ್ತು ಅಸ್ವಾಭಾವಿಕ ಸ್ವರೂಪ (ರಾಮಚಂದ್ರರಾವ್ ಎಸ್.ಕೆ.೧೯೭೫, ಪು.೫೦).[೨೯]

ಕೆಲವು ಸ್ಥಳಗಳಲ್ಲಿ ಮಣ್ಣಿನಲ್ಲಿ, ಮರದಲ್ಲಿ ಗೊಂಬೆಗಳನ್ನು ಮಾಡಿಕೊಂಡು ಮರದಬುಡದಲ್ಲಿ ಕಟ್ಟೆಯ ಮೇಲೆ ಕಲ್ಲು ಚಪ್ಪಡಿಯ ರೂಪದಲ್ಲಿ ಗುಡಿಯನ್ನು ನಿರ್ಮಿಸಿ ತಮಗೆ ತೋರಿಬಂದ ರೀತಿಯಲ್ಲಿ ಪೂಜಿಸುತ್ತಿದ್ದರು.[೩೦]

ಸೃಷ್ಟಿಕರ್ತ ಪರಮಾತ್ಮನಿಗೆ ಯಾವುದೇ ಒಂದು ನಿರ್ದಿಷ್ಟವಾದ ಆಕಾರವಿಲ್ಲ(ಸ್ವರೂಪ) ಇದು ಪರಮಸತ್ಯ. ಒಂದು ದೇವರ ಮೂರ್ತಿಯು ಒಂದೊಂದು ಆಧ್ಯಾತ್ಮಿಕ ತತ್ವವನ್ನು ಒಳಗೊಂಡಿದೆ. ಸಮಾಜದಲ್ಲಿ ಬಳಕೆಯಲ್ಲಿರುವ ಅರ್ಥಪೂರ್ಣ ಸಂಕೇತ ಮುದ್ರೆ ಅಥವಾ ಮಾಧ್ಯಮದ ಮೂಲಕ ಸೂಚಿಸುತ್ತದೆ. ಮೂರ್ತಿ ರೂಪವನ್ನು ಮನದಲ್ಲಿ ಕಲ್ಪಿಸಿಕೊಂಡು ಶಾಸ್ತ್ರ ರೀತಿಯ ಒಂದು ವಸ್ತು ಆಯ್ಕೆ ಮಾಡಿಕೊಂಡು ಆ ವಸ್ತುವಿನಲ್ಲಿ ಮೂರ್ತಿಶಿಲ್ಪವನ್ನು ಚಿತ್ರಿಸಿಕೊಂಡು ಮೂರ್ತಿಶಿಲ್ಪದ ಉಗಮವಾಗಿರಬೇಕು.[೩೧] ಶಿಲ್ಪಶಾಸ್ತ್ರಗಳ ಗ್ರಂಥಗಳಾದ ಮಯಮತ, ಮಾನಸಾರ, ಅಶುಮದ್ಭೇಗಾಮನ ಶಿಲ್ಪ ಸಂಗ್ರಹ, ಇವು ದೇವಾನುದೇವತೆಗಳನ್ನು ಉಲ್ಲೇಖಿಸುತ್ತವೆ. ಮೂರ್ತಿಶಿಲ್ಪದ ಮಾಧ್ಯಮ ಶಿಲೆಯಾಗಿರಬಹುದು. ಲೋಹವಾಗಿರಬಹುದು ಮಣ್ಣು ಇರಬಹುದು. ಒಟ್ಟಾರೆ ಶಿಲ್ಪಿ ಮಾಧ್ಯಮದ ಮೂಲಕ ಆಕಾರವನ್ನು ಕೊಡುತ್ತಾನೆ. ಇದು ಶಾಸನದಲ್ಲಿ ಉಲ್ಲೇಖವಾಗಿದೆ.[೩೨]

ದೇವಾಲಯದಲ್ಲಿ ವಾಸ್ತು ವಿನ್ಯಾಸಕ್ಕಿಂತಲೂ ಹೆಚ್ಚು ಆಕರ್ಷಿಸುವುದು ಅಲ್ಲಿಯ ಮೂರ್ತಿಶಿಲ್ಪ. ಇದರಲ್ಲಿ ಮೂರು ವಿಧಗಳಿವೆ. ೧. ಸ್ಥಾನಿಕ ೨. ಆಸೀನ ೩. ಶಯನ ಮೂರ್ತಿ ಎಂದು. ಮೂರ್ತಿ ಶಿಲ್ಪವನ್ನು ಇಂತಹುದೇ ಎಂದು ಗುರುತಿಸಲು ಅದಕ್ಕೆ ತನ್ನದೇ ಆದ ಲಕ್ಷಣಗಳಿರುತ್ತವೆ.[೩೩] ಈ ಹಿನ್ನೆಲೆಯನ್ನು ಆಧರಿಸಿಕೊಂಡು ಪ್ರಸ್ತುತ ನೀಲಗುಂದ ಪರಿಸರದ ಮೂರ್ತಿಗಳ ಲಕ್ಷಣಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಿದಾಗ ಈ ಪರಿಸರದಲ್ಲಿ ಶೈವ ಪಂಥವು ಮುಂಚೂಣಿಯಲ್ಲಿತ್ತೆಂದು ತಿಳಿಯಲು ಈ ದೇವಾಲಯಗಳೇ ಸ್ಪಷ್ಟ ಆಧಾರಗಳಾಗಿವೆ. ಅಲ್ಲದೆ ವೈಷ್ಣವ ಪಂಥದ ಮೂರ್ತಿಗಳು ಮತ್ತು ಶಾಕ್ತ ಮೂರ್ತಿಶಿಲ್ಪಗಳು ಈ ಪರಿಸರದಲ್ಲಿವೆ. ಇವುಗಳನ್ನು ಪಟ್ಟಿಕೆಯ ಮೂಲಕ ತಿಳಿಸಲಾಗಿದೆ.

೧. ಶೈವ ಪಂಥದ ಮೂರ್ತಿ ಶಿಲ್ಪಗಳು : ವೀರಭದ್ರೇಶ್ವರ, ಶಿವಲಿಂಗ, ನಂದಿ, ಗಣಪತಿ

೨. ವೈಷ್ಣವ ಮೂರ್ತಿ ಶಿಲ್ಪಗಳು : ೧. ಲಕ್ಷ್ಮೀ ನಾರಾಯಣ, ಅನಂತಶಯನ, ಉಗ್ರ ನರಸಿಂಹ, ತಿಮ್ಮಪ್ಪ, ಕೇಶವ, ಆಂಜನೇಯ

೩. ಶಾಕ್ತ ಮೂರ್ತಿಶಿಲ್ಪಗಳು : ೧. ಮಹಿಷಾಸುರ ಮರ್ದಿನಿ ೨. ಸಪ್ತಮಾತೃಕೆಯರು, ೩. ಸರಸ್ವತಿ

## ಶಿಲಾಮೂರ್ತಿಗಳು

ಮನುಷ್ಯನು ಪ್ರಾರಂಭದಿಂದಲೂ ಶಿಲೆಯೊಡನೆ ನಿಕಟವಾದ ಸಂಬಂಧವನ್ನು ರೂಢಿಸಿಕೊಂಡು ಬಂದಿದ್ದಾನೆ. ಈ ಶಿಲೆಗಳಿಂದ ಮೂರ್ತಿ ಕೆತ್ತನೆಯ ಕಾರ್ಯವನ್ನು ಕೈಗೊಳ್ಳುತ್ತ ಬಂದಿದ್ದಾನೆ. ಮತ್ಸ್ಯಪುರಾಣದಲ್ಲಿ, ಕಲ್ಲಿನ ಮೂರ್ತಿ ತಯಾರಿಕೆ ಬಗ್ಗೆ ನಿರ್ದೇಶನವಿದೆ. ಶಿಲೆಗಳಲ್ಲಿ ಪುರುಷ ಶಿಲೆ, ಸ್ತ್ರೀ ಶಿಲೆ, ಇತರ ನಪುಂಸಕ ಶಿಲೆಗಳಿದ್ದು, ಅವುಗಳನ್ನು ಕ್ರಮವಾಗಿ ಮುಖ್ಯ ಮೂರ್ತಿ ಪೀಠ, ಪೀಠಿಕ ಅಥವಾ ಕಳಭಾಗದ ರಚನೆಗೆ ಬಳಸಬೇಕೆಂದು ತಿಳಿಸಲಾಗಿದೆ. ಈ ಶಿಲೆಗಳಲ್ಲಿ ಯುವ, ಮದ್ಯ, ಬಾಲ ಹಾಗೂ ವೃದ್ಧವೆಂಬ ಬಗೆಗಳಿದ್ದು, ಮೊದಲಿನ ಎರಡು ಪ್ರಕಾರಗಳ ಮೂರ್ತಿ ರಚನೆಗೆ ಯೋಗ್ಯವಾದವುಗಳು ವಿಗ್ರಹ ರಚನೆಯ ಅಂದಾಜು ಅಳತೆಗಿಂತಲೂ ಕಲ್ಲು ಸ್ವಲ್ಪ ದೊಡ್ಡದಿರಬೇಕಾಗುತ್ತದೆ ಎಂದು ಇದೇ ಗ್ರಂಥ ಉಲ್ಲೇಖೀಸಿದೆ.[೩೪]

ಈ ಮೂರ್ತಿಶಿಲ್ಪದ ಬಗ್ಗೆ ವಿಷ್ಣು ಪುರಾಣ ಧರ್ಮೋತ್ತರ ಪುರಾಣ ಶಿಲಾಮೂರ್ತಿಗಳನ್ನು ತಯಾರಿಸುವ ಕುರಿತು ವಿವರಣೆ ನೀಡುತ್ತದೆ. ಇದರ ಹತ್ತೊಂಬತ್ತನೆಯ ಅಧ್ಯಾಯವು ಶಿಲಾ ಪರೀಕ್ಷೆಗೆ ಮೀಸಲಾಗಿದೆ. ಇದರಲ್ಲಿ ಬಿಳಿ, ಕೆಂಪು, ಹಳದಿ ಮತ್ತು ಕೆಂಪು ಕಲ್ಲುಗಳನ್ನು ಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ಆರಾಧಿಸುವ ಮೂರ್ತಿ ರಚನೆಗೆ ಬಳಸಬೇಕೆಂದು ಹಾಗೂ ಕಲ್ಲುಗಳು ಸರಿಯಾದ ಉದ್ದ, ಅಗಲ ಮತ್ತು ದಪ್ಪವನ್ನು ಹೊಂದಿರಬೇಕೆಂದು ಅದು ಹೇಳುತ್ತದೆ. ಗೋಪಾಲಭಟ್ಟರು ರಚಿಸಿದ ಹರಿಭಕ್ತ ವಿಲಾಸದ ಹದಿನೆಂಟನೇ ಅಧ್ಯಾಯದ ಕೊನೆಯ ಭಾಗವು ಇದೇ ವಿಷಯವನ್ನು ವಿವರಿಸುತ್ತದೆ.[೩೫]

## ಶೈವಮೂರ್ತಿ ಶಿಲ್ಪಗಳು

ಶೈವ ಪಂಥವು ಪ್ರಾಚೀನ ಕಾಲದ ಪಂಥವೆಂಬುದಂತೂ ಸ್ಪಷ್ಟವಾಗಿದೆ. ಎಲ್ಲ ಕಡೆಯಲ್ಲಿ ಶೈವ ಮೂರ್ತಿಗಳು ವ್ಯಾಪಿಸಿವೆ. ತ್ರಿಮೂರ್ತಿಗಳಲ್ಲಿ ಒಬ್ಬನಾದ ಶಿವಮೂರ್ತಿಯ ಸ್ವರೂಪಕ್ಕಿಂತ ಅಮೂರ್ತವಾದ ಲಿಂಗದ ಸ್ವರೂಪದಲ್ಲಿಯೇ ಹೆಚ್ಚಿನ ಮಟ್ಟಿಗೆ ಶಿವನನ್ನು ಪೂಜಿಸುವ ಸಂಪ್ರದಾಯವಿದೆ.

ಶೈವ ಪಂಥಕ್ಕೆ ಸೇರಿದ ಮೂರ್ತಿಶಿಲ್ಪಗಳು ನೀಲಗುಂದ ಪರಿಸರದಲ್ಲಿ ಹೆಚ್ಚಾಗಿ ಕಂಡುಬಂದಿವೆ. ಅವುಗಳಲ್ಲಿ ಮುಖ್ಯವಾಗಿ ಬರುವ ಮೂರ್ತಿಗಳೆಂದರೆ ಶಿವಲಿಂಗ ನಂದಿ, ವೀರಭದ್ರೇಶ್ವರ, ಗಣಪತಿ ಈ ಮೂರ್ತಿಗಳೆಲ್ಲವೂ ಒಂದು ಮಾದರಿಯಲ್ಲಿ ಕಂಡುಬರುತ್ತವೆ.

ಈ ಪ್ರದೇಶದಲ್ಲಿ ಲಭ್ಯವಾದ ಮೂರ್ತಿಶಿಲ್ಪಗಳನ್ನು ಅವುಗಳ ಶೈಲಿಯ ಆಧಾರದ ಮೇಲೆ ಅವುಗಳ ಲಕ್ಷಣಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

| | |
|---|---|
| **ಗ್ರಾಮ** : ನೀಲಗುಂದ | **ಶೈಲಿ** : ಕಲ್ಯಾಣಿ ಚಾಲುಕ್ಯ |
| **ಸ್ಥಳ** : ಊರಿನ ಹಿಂಭಾಗದಲ್ಲಿರುವ ಈರಣ್ಣ ಗುಡಿ | **ಅಭಿಮುಖ** : ಉತ್ತರಾಭಿಮುಖ |
| **ಸ್ಮಾರಕ** : ವೀರಭದ್ರೇಶ್ವರ | **ಸ್ಥಿತಿ** : ಉತ್ತಮ |
| **ಕಾಲ** : ಕ್ರಿ.ಶ.೧೧.ನೇ. ಶತಮಾನ | **ಪಂಥ** : ಶೈವ |

ಪೀಠದ ಮೇಲೆ ಸುಕನಾಸಿಯಲ್ಲಿರುವ ಈ ಮೂರ್ತಿ ಉತ್ತರಕ್ಕೆ ಅಭಿಮುಖವಾಗಿದೆ. ಚೌಕಾಕಾರದ ಕಲ್ಲಿನ ಒಂದು ಅಡಿ ಎತ್ತರ ಪೀಠದ ಮೇಲೆ ಸುಮಾರು ೪ ಅಡಿ ಎತ್ತರ ೨ ಅಡಿ ಅಗಲ ಇದ್ದು, ಇದಕ್ಕೆ ಕಪ್ಪು ಶಿಲೆಯನ್ನು ಬಳಸಿದ್ದಾರೆ. ಈ ಮೂರ್ತಿಗೆ ನಾಲ್ಕು ಕೈಗಳಿದ್ದು, ಬಲಭಾಗದ ಕೈಯಲ್ಲಿ ಬಿಲ್ಲು ಮತ್ತು ಕೆಳಗಿನ ಕೈಯಲ್ಲಿ ಹಲಗೆ ಎಡಭಾಗ ಕೈಯಲ್ಲಿ ಅಭಯ ಮುದ್ರೆ ಕೆಳಗಿನ ಕೈಯಲ್ಲಿ ಬಾಣವನ್ನು, ಖಡ್ಗವನ್ನು ಮತ್ತು ಗುರಾಣಿಯನ್ನು ಹಿಡಿದುಕೊಂಡಿದೆ. ಈ ಮೂರ್ತಿಯು ಅತ್ಯಂತ ಸೂಕ್ಷ್ಮವಾದ ಕೆತ್ತನೆಯಿಂದ ಕೂಡಿದೆ. ಈ ಮೂರ್ತಿಯ ಹಿಂಭಾಗದಲ್ಲಿ ಪ್ರಭಾವಳಿಯನ್ನು ಹೊಂದಿದೆ.

| | |
|---|---|
| **ಗ್ರಾಮ** : ನೀಲಗುಂದ | **ಶೈಲಿ** : ಕಲ್ಯಾಣಿ ಚಾಲುಕ್ಯ |
| **ಸ್ಥಳ** : ಭೀಮೇಶ್ವರ ದೇವಾಲಯ | **ಅಭಿಮುಖ** : ಪೂರ್ವಾಭಿಮುಖ |
| **ಸ್ಮಾರಕ** : ಶಿವಲಿಂಗ | **ಸ್ಥಿತಿ** : ಉತ್ತಮ |
| **ಕಾಲ** : ಕ್ರಿ.ಶ.೧೧.ನೇ. ಶತಮಾನ | **ಪಂಥ** : ಶೈವ |

ನೀಲಗುಂದ ಗ್ರಾಮದ ಉತ್ತರ ದಿಕ್ಕಿನಲ್ಲಿರುವ ಭೀಮೇಶ್ವರ ದೇವಾಲಯವು ಬಹಳ ಸುಂದರವಾದ ದೇಗುಲವಾಗಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಅರ್ಧ ಅಡಿ ಪಾಣಿ ಪೀಠದ ಮೇಲೆ ಶಿವ ಪ್ರತಿಷ್ಠಾಪನೆ ಮಾಡಲಾಗಿದೆ. ಈ ಶಿವಲಿಂಗವು ಸುಮಾರು ೪ ಅಡಿ ಎತ್ತರವನ್ನು ಹೊಂದಿದ್ದು, ೪ ಅಡಿ ಅಗಲವಿದೆ. ಲಿಂಗದ ಮೇಲುಭಾಗದಲ್ಲಿ ನಾಮದ ಆಕಾರವನ್ನು ಮಾಡಿರುವುದನ್ನು ಗುರುತಿಸಲಾಗಿದೆ. ಈ ಲಿಂಗದ ಪೀಠವು ಚೌಕಾಕಾರವಾಗಿದ್ದು, ಲಿಂಗವು ವೃತ್ತಕಾರವನ್ನು ಹೊಂದಿದೆ. ಈ ಮೂರ್ತಿ ಕಲ್ಯಾಣಿ ಚಾಲುಕ್ಯರ ಅವಧಿಯಲ್ಲಿ ನಿರ್ಮಾಣವಾಗಿದೆ.

| | |
|---|---|
| **ಗ್ರಾಮ** : ಚಿರಸ್ತಹಳ್ಳಿ | **ಶೈಲಿ** : ರಾಷ್ಟ್ರಕೂಟ |
| **ಸ್ಥಳ** : ಶಂಕರಲಿಂಗ ದೇವಾಲಯ | **ಅಭಿಮುಖ** : ಪೂರ್ವಾಭಿಮುಖ |
| **ಸ್ಮಾರಕ** : ಶಿವಲಿಂಗ | **ಸ್ಥಿತಿ** : ಕನಿಷ್ಠ |
| **ಕಾಲ** : ಕ್ರಿ.ಶ.೧೦.ನೇ. ಶತಮಾನ | **ಪಂಥ** : ಶೈವ |

ಈ ಮೂರ್ತಿಯನ್ನು ಸ್ಥಾಪಿಸುವ ಮೊದಲು ಸ್ವಲ್ಪ ಪ್ರಮಾಣದ ಪೀಠವನ್ನು ಮಾಡಿಸಿ ಅದರ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಶಿವಲಿಂಗವು ಒಂದೂವರೆ ಅಡಿ ಎತ್ತರವಿದ್ದು, ೨ ಅಡಿ

ಅಗಲವನ್ನು ಹೊಂದಿದೆ. ಈ ಲಿಂಗವು ಚೌಕಾಕಾರದ ಪೀಠವನ್ನು ಹೊಂದಿದೆ. ಲಿಂಗವು ವೃತ್ತಕಾರವನ್ನು ಹೊಂದಿದೆ. ಕಪ್ಪು ಶಿಲೆಯನ್ನು ಬಳಸಲಾಗಿದೆ. ಯಾವುದೇ ಅಲಂಕಾರ ಕಂಡುಬರುವುದಿಲ್ಲ.

| | |
|---|---|
| ಗ್ರಾಮ : ನೀಲಗುಂದ | ಶೈಲಿ : ಕಲ್ಯಾಣಿ ಚಾಲುಕ್ಯ |
| ಸ್ಥಳ : ಮುಕ್ತಿರಾಮೇಶ್ವರ ದೇವಾಲಯ | ಅಭಿಮುಖ : ಪೂರ್ವಾಭಿಮುಖ |
| ಸ್ಮಾರಕ : ಶಿವಲಿಂಗ | ಸ್ಥಿತಿ : ಕನಿಷ್ಠ |
| ಕಾಲ : ಕ್ರಿ.ಶ.೧೧.ನೇ. ಶತಮಾನ | ಪಂಥ : ಶೈವ |

ಈ ಮೂರ್ತಿಯನ್ನು ಸ್ಥಾಪಿಸುವ ಮೊದಲ ಸ್ವಲ್ಪ ಪ್ರಮಾಣದ ಪೀಠವನ್ನು ಮಾಡಿಸಿ ಅದರ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಶಿವಲಿಂಗವು ಎರಡುವರೆ ಅಡಿ ಎತ್ತರವಿದ್ದು, ೨ ಅಡಿ ಅಗಲವನ್ನು ಹೊಂದಿದೆ. ಈ ಲಿಂಗವು ಚೌಕಾಕಾರದ ಪೀಠವನ್ನು ಹೊಂದಿದೆ. ಲಿಂಗವು ವೃತ್ತಾಕಾರವನ್ನು ಹೊಂದಿದೆ. ಕಪ್ಪು ಶಿಲೆಯನ್ನು ಬಳಸಲಾಗಿದೆ. ಯಾವುದೇ ಅಲಂಕಾರ ಕಂಡುಬರುವುದಿಲ್ಲ.

| | |
|---|---|
| ಗ್ರಾಮ : ಕುಂಚೂರು | ಶೈಲಿ : ಕಲ್ಯಾಣಿ ಚಾಲುಕ್ಯ |
| ಸ್ಥಳ : ಮಲ್ಲಿಕಾರ್ಜುನ ದೇವಾಲಯ | ಅಭಿಮುಖ : ಪೂರ್ವಾಭಿಮುಖ |
| ಸ್ಮಾರಕ : ಶಿವಲಿಂಗ | ಸ್ಥಿತಿ : ಕನಿಷ್ಠ |
| ಕಾಲ : ಕ್ರಿ.ಶ.೧೨.ನೇ. ಶತಮಾನ | ಪಂಥ : ಶೈವ |

ಈ ಮೂರ್ತಿಯು ಮಲ್ಲಿಕಾರ್ಜುನ ಗರ್ಭಗೃಹದ ಪೀಠದ ಮೇಲೆ ಪ್ರತಿಷ್ಠಾಪನೆ ಮಾಡಲಾಗಿದೆ. ಈ ದೇವಾಲಯವು ರಕ್ಷಣೆಯಿಲ್ಲದ ಕಾರಣದಿಂದ ಲಿಂಗವು ಭೂಮಿಯಲ್ಲಿ ಮುಚ್ಚಿ ಹೋಗಿದೆ. ಈಗ ಕೇವಲ ಮೇಲುಭಾಗದ ಲಿಂಗ ಮಾತ್ರ ಕಾಣಬಹುದು. ಅದರ ಮೇಲೆ ಯಾವುದೇ ಅಲಂಕಾರ ಕಂಡುಬರುವುದಿಲ್ಲ. ಲಿಂಗವು ಸರಳವಾಗಿದ್ದು, ಇದರ ಅಳತೆ ಮಾಡಲು ಅಸಾಧ್ಯವಾಗಿದೆ. ಈ ಮೂರ್ತಿಯು ಚಾಲುಕ್ಯರ ಕಾಲದಲ್ಲಿ ರಚನೆಯಾಗಿರಬಹುದೆಂದು ಊಹಿಸಲಾಗಿದೆ.

| | |
|---|---|
| ಗ್ರಾಮ : ಕುಂಚೂರು | ಶೈಲಿ : ಕಲ್ಯಾಣಿ ಚಾಲುಕ್ಯ |
| ಸ್ಥಳ : ಕಲ್ಲೇಶ್ವರ ದೇವಾಲಯ | ಅಭಿಮುಖ : ಪೂರ್ವಾಭಿಮುಖ |
| ಸ್ಮಾರಕ : ಶಿವಲಿಂಗ | ಸ್ಥಿತಿ : ಉತ್ತಮ |
| ಕಾಲ : ಕ್ರಿ.ಶ.೧೨.ನೇ. ಶತಮಾನ | ಪಂಥ : ಶೈವ |

ಈ ಮೂರ್ತಿಯು ಕಲ್ಲೇಶ್ವರ ದೇವಾಲಯ ಗರ್ಭಗೃಹದ ಪೀಠದ ಮೇಲೆ ಇದ್ದು, ಈ ಲಿಂಗವು ಸುಮಾರು ೨ ಅಡಿ ಉತ್ತರ, ೨ ಅಡಿ ಅಗಲವನ್ನು ಹೊಂದಿದೆ. ಈ ಲಿಂಗವು ಚೌಕಾಕಾರ ಮತ್ತು ವೃತ್ತಾಕಾರ ಲಿಂಗವನ್ನು ಹೊಂದಿದೆ. ಯಾವುದೇ ಅಲಂಕಾರ ಲಿಂಗದಲ್ಲಿ ಕಂಡುಬರುವುದಿಲ್ಲ. ಈ ದೇವಾಲಯ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಹೇಳಲಾಗಿದೆ.

ಗ್ರಾಮ : ಹಲುವಾಗಲು
ಸ್ಥಳ : ಕಲ್ಲೇಶ್ವರ ದೇವಾಲಯ
ಸ್ಮಾರಕ : ಶಿವಲಿಂಗ
ಕಾಲ : ಕ್ರಿ.ಶ.೧೨.ನೇ. ಶತಮಾನ

ಶೈಲಿ : ಕಲ್ಯಾಣಿ ಚಾಲುಕ್ಯ
ಅಭಿಮುಖ : ಪೂರ್ವಾಭಿಮುಖ
ಸ್ಥಿತಿ : ಉತ್ತಮ
ಪಂಥ : ಶೈವ

ಈ ಮೂರ್ತಿಯು ಗರ್ಭಗೃಹದಲ್ಲಿ ಪೂರ್ವಾಭಿಮುಖವಾಗಿ ಪ್ರತಿಷ್ಠಾಪಿತವಾಗಿದೆ. ಒಂದು ಅಡಿ ಎತ್ತರ ೨ ಅಡಿ ಅಗಲ ಹೊಂದಿದೆ. ಈ ಲಿಂಗದ ಮೇಲೆ ಯಾವುದೇ ಅಲಂಕಾರ ಕಂಡುಬರುವುದಿಲ್ಲ. ಇದು ವೃತ್ತಾಕಾರ ಮತ್ತು ಚೌಕಾಕಾರವನ್ನು ಹೊಂದಿದೆ. ಲಿಂಗದ ಮೇಲೆ ಲೋಹದಿಂದ ಮಾಡಿದ(ಕಬ್ಬಿಣ) ಏಳು ಹೆಡೆಗಳುಳ್ಳ ಸರ್ಪವನ್ನು ಇಡಲಾಗಿದೆ.

ಗ್ರಾಮ : ಕುಂಚೂರು
ಸ್ಥಳ : ಕಲ್ಲೇಶ್ವರ ದೇವಾಲಯ
ಸ್ಮಾರಕ : ನಂದಿ
ಕಾಲ : ಕ್ರಿ.ಶ.೧೨.ನೇ. ಶತಮಾನ

ಶೈಲಿ : ಕಲ್ಯಾಣಿ ಚಾಲುಕ್ಯ
ಅಭಿಮುಖ : ಪೂರ್ವಾಭಿಮುಖ
ಸ್ಥಿತಿ : ಮಧ್ಯಮ
ಪಂಥ : ಶೈವ

ಈ ಮೂರ್ತಿ ಕುಳಿತ ಭಂಗಿಯಲ್ಲಿದೆ. ಹಣೆಪಟ್ಟಿ ಧರಿಸಿದೆ. ಕೊರಳಲ್ಲಿ ಗೆಜ್ಜೆಸರ ಕೊರಳಲ್ಲಿ ಗಂಟೆ, ಕೊರಳ ಅಗಡ ಹಾಗೂ ಭುಜದ ಹಿಂಭಾಗದಲ್ಲಿ ಅಗಲವಾದ ಹಾರ ಧರಿಸಿದೆ. ಈ ಮೂರ್ತಿ ನೋಡಲು ಬಹಳ ಆಕರ್ಷಣೀಯವಾಗಿದೆ.

ಗ್ರಾಮ : ಹಲುವಾಗಲು
ಸ್ಥಳ : ಕಲ್ಲೇಶ್ವರ ದೇವಾಲಯ
ಸ್ಮಾರಕ : ನಂದಿ
ಕಾಲ : ಕ್ರಿ.ಶ.೧೨.ನೇ. ಶತಮಾನ

ಶೈಲಿ : ಕಲ್ಯಾಣಿ ಚಾಲುಕ್ಯ
ಅಭಿಮುಖ : ಪೂರ್ವಾಭಿಮುಖ
ಸ್ಥಿತಿ : ಉತ್ತಮ
ಪಂಥ : ಶೈವ

ಈ ಮೂರ್ತಿಯು ಎಡಭಾಗಕ್ಕೆ ಕುಳಿತ ಭಂಗಿಯಲ್ಲಿದೆ. ಸುಮಾರು ಎರಡು ಅಡಿ ಎತ್ತರ ೨ ಅಡಿ ಅಗಲವನ್ನು ಹೊಂದಿದೆ. ಹಣೆಯ ಮೇಲೆ ಪಟ್ಟಿ, ಕೊರಳಲ್ಲಿ ಗಂಟೆ, ಗೆಜ್ಜೆಸರ, ಬೆನ್ನಗೂನ, ಕೆಳಭಾಗಕ್ಕೆ ಅಗಲವಾದ ಹಾರ ಧರಿಸಿದೆ. ಈ ಮೂರ್ತಿಯು ವಿಶಿಷ್ಟ ರೀತಿಯಲ್ಲಿದೆ.

ಗ್ರಾಮ : ಚಿರಸ್ತಹಳ್ಳಿ
ಸ್ಥಳ : ಕಲ್ಲೇಶ್ವರ ದೇವಾಲಯ
ಸ್ಮಾರಕ : ನಂದಿ
ಕಾಲ : ಕ್ರಿ.ಶ.೧೦.ನೇ. ಶತಮಾನ

ಶೈಲಿ : ಕಲ್ಯಾಣಿ ಚಾಲುಕ್ಯ
ಅಭಿಮುಖ : ಪೂರ್ವಾಭಿಮುಖ
ಸ್ಥಿತಿ : ಕನಿಷ್ಠ
ಪಂಥ : ಶೈವ

ಈ ನಂದಿಯ ಶಿಲ್ಪ ಕುಳಿತ ಭಂಗಿಯಲ್ಲಿದೆ. ಕೊರಳಲ್ಲಿ ಅಗಲವಾದ ಕಂಠಹಾರ, ಘಂಟೆ ಮತ್ತು ಗೆಜ್ಜೆಯ ಸರ. ಹಣೆಯಲ್ಲಿ ಪಟ್ಟಿ, ಬೆನ್ನಗೂನ, ಕೆಳಗೆ ಮಣಿ ಸರಳಗಳಿಂದ ಅಲಂಕೃತವಾಗಿದೆ.

ಗ್ರಾಮ : ನೀಲಗುಂದ | ಶೈಲಿ : ಕಲ್ಯಾಣಿ ಚಾಲುಕ್ಯ
ಸ್ಥಳ : ದೇವಾಲಯದ ಒಳಭಾಗ | ಅಭಿಮುಖ : ಪೂರ್ವಾಭಿಮುಖ
ಸ್ಮಾರಕ : ನಂದಿ | ಸ್ಥಿತಿ : ಕನಿಷ್ಠ
ಕಾಲ : ಕ್ರಿ.ಶ.೧೧.ನೇ. ಶತಮಾನ | ಪಂಥ : ಶೈವ

ಈ ನಂದಿಯು ಕುಳಿತ ಭಂಗಿಯಲ್ಲಿದೆ. ಎಡಕ್ಕೆ ಮುಖ ಮಾಡಿಕೊಂಡಂತಿದೆ. ಕೊರಳಲ್ಲಿ ಘಂಟೆ, ಗೆಜ್ಜೆಯ, ಸರ ಬೆನ್ನ ಹಿಂಬದಿಗೆ ಅಗಲವಾದ ಹಾರ ನೋಡಲು ಆಕರ್ಷಣೀಯವಾಗಿದೆ.

ಗ್ರಾಮ : ಚಿರಸ್ತಹಳ್ಳಿ | ಶೈಲಿ : ಕಲ್ಯಾಣಿ ಚಾಲುಕ್ಯ
ಸ್ಥಳ : ಶಂಕರಲಿಂಗ ದೇವಾಲಯ | ಅಭಿಮುಖ : ಪೂರ್ವಾಭಿಮುಖ
ಸ್ಮಾರಕ : ನಂದಿ | ಸ್ಥಿತಿ : ಮಧ್ಯಮ
ಕಾಲ : ಕ್ರಿ.ಶ.೧೦.ನೇ. ಶತಮಾನ | ಪಂಥ : ಶೈವ

ಈ ಮೂರ್ತಿಯನ್ನು ಸ್ವಲ್ಪ ಗದ್ದುಗೆಯನ್ನು ಮಾಡಿ ಅದರ ಮೇಲೆ ಪ್ರತಿಷ್ಠಾಪನೆ ಮಾಡಲಾಗಿದೆ. ಸುಮಾರು ೨ ಅಡಿ ಎತ್ತರ, ೨ ಅಡಿ ಅಗಲ ಹೊಂದಿದೆ. ಕುಳಿತ ಭಂಗಿಯಲ್ಲಿದೆ. ಬಲಭಾಗ ಮಲಗಿದ ಹಾಗಿದೆ. ಕೊರಳಲ್ಲಿ ಹಾರ ಗಂಟೆ, ಸರ, ಗೆಜ್ಜೆ ಸರ, ಹಣೆಪಟ್ಟಿಯನ್ನು ಹೊಂದಿದೆ. ಕೆಳಗೆ ಮಣಿ ಸರಗಳಿಂದ ಅಲಂಕೃತವಾಗಿದೆ.

ಗ್ರಾಮ : ನೀಲಗುಂದ | ಶೈಲಿ : ಕಲ್ಯಾಣಿ ಚಾಲುಕ್ಯ
ಸ್ಥಳ : ಬಸವಣ್ಣ ದೇವಾಲಯದ ಒಳಭಾಗ | ಅಭಿಮುಖ : ಪೂರ್ವಾಭಿಮುಖ
ಸ್ಮಾರಕ : ನಂದಿ | ಸ್ಥಿತಿ : ಕನಿಷ್ಠ
ಕಾಲ : ಕ್ರಿ.ಶ.೧೧ ಮತ್ತು ೧೨ನೇ ಶತಮಾನ | ಪಂಥ : ಶೈವ

ಇದು ಗ್ರಾಮದ ಹೊರವಲಯದಲ್ಲಿದೆ. ಸುಮಾರು ೨ ಅಡಿ ಎತ್ತರ ೨ ಅಡಿ ಅಗಲವನ್ನು ಹೊಂದಿದ್ದು, ಈ ಮೂರ್ತಿಯ ಆಸೀನ ಸ್ಥಾನದಲ್ಲಿ ಕಂಡುಬರುತ್ತದೆ. ಕೊರಳಲ್ಲಿ ಕಂಠಹಾರ, ಕಟ್ಟಿದಗಂಟೆ, ಗೆಜ್ಜೆ ಸರ, ಹಣೆ ಪಟ್ಟಿ, ಅಲ್ಲದೇ ಬೆನ್ನ ಮೇಲೆ ಜೂಲ್ ಹಾಕಿರುವ ರೀತಿಯಲ್ಲಿ ಬಹಳ ಸೂಕ್ಷ್ಮವಾದ ರೀತಿಯಲ್ಲಿ ಕೆತ್ತಿರುವುದನ್ನು ಗಮನಿಸಬಹುದು. ಈ ಮೂರ್ತಿ ೧೧ನೇ ಶತಮಾನ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಹೇಳಲಾಗಿದೆ.

## ಗಣಪತಿ ಮೂರ್ತಿಶಿಲ್ಪ

ಗಣಪತಿಗೆ ವಿನಾಯಕ, ವಿಘ್ನೇಶ್ವರ, ಗಜಮುಖ ಮುಂತಾದ ಹೆಸರುಗಳು ಇವೆ. ಗಣಪತಿಯು ಇಲ್ಲದೇ ಇರುವ ಸ್ಥಳವೇ ಇಲ್ಲ. ಈ ಮೂರ್ತಿಯನ್ನು ಎಲ್ಲ ಧರ್ಮದವರು ಪೂಜಿಸುತ್ತಾರೆ. ಯಾವುದೇ ಕಾರ್ಯಗಳನ್ನು ಪ್ರಾರಂಭಿಸುವ ಮೊದಲು ಗಣಪತಿಯನ್ನು ಪೂಜಿಸುತ್ತಾರೆ. ನಾಡಿನವರೆಲ್ಲರೂ (ಗಾಣ

ಪತ್ನಿಯರೇ) ಗಣೇಶನ ಮೂರ್ತಿ ಶಿಲ್ಪವನ್ನು ಶೈವ ದೇವಾಲಯಗಳಲ್ಲಿ ಅಥವಾ ಪ್ರತ್ಯೇಕವಾಗಿ ದೇವಾಲಯಗಳಲ್ಲಿ ಪೂಜಿಸುತ್ತಾರೆ.

ಗಣಪತಿ ಮೂರ್ತಿಯ ಪಕ್ಕದಲ್ಲಿ ಸಪ್ತ ಮಾತೆಯರ ಪಟ್ಟಿಯು ಇರುವುದು ಕಂಡುಬರುತ್ತದೆ. ದೇವಾಲಯಗಳಲ್ಲಿ ಅಥವಾ ಮನೆಗಳಲ್ಲಿ ಪೂಜಿಸುವ ಗಣಪತಿಗಳಲ್ಲಿ ಕೆಲವು ವೈವಿಧ್ಯತೆಗಳು ಕಂಡುಬರುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ನೀಲಗುಂದ ಪರಿಸರದಲ್ಲಿ ಕುಂಚೂರು, ಹಲುವಾಗಲು ನೀಲಗುಂದ ಇತರೆ ಗಣಪತಿ ಮೂರ್ತಿಶಿಲ್ಪಗಳನ್ನು ಆಯ್ದುಕೊಂಡು ಅವುಗಳಲ್ಲಿ ಮುಖ್ಯವಾದ ಗಣಪತಿ ಮೂರ್ತಿಶಿಲ್ಪದ ಲಕ್ಷಣಗಳನ್ನು ಇಲ್ಲಿ ಪ್ರಸ್ತಾಪಿಸಿದ್ದೇನೆ.

| | |
|---|---|
| ಗ್ರಾಮ : ನೀಲಗುಂದ | ಶೈಲಿ : ಕಲ್ಯಾಣಿ ಚಾಲುಕ್ಯ |
| ಸ್ಥಳ : ಮುಕ್ತಿರಾಮೇಶ್ವರದ ಒಳಭಾಗದಲ್ಲಿ | ಅಭಿಮುಖ : ಪೂರ್ವಾಭಿಮುಖ |
| ಸ್ಮಾರಕ : ಗಣಪತಿ | ಸ್ಥಿತಿ : ಕನಿಷ್ಠ |
| ಕಾಲ : ಕ್ರಿ.ಶ.೧೧ನೇ ಶತಮಾನ | ಪಂಥ : ಶೈವ |

ಪೀಠದ ಮೇಲೆ ಸುಕನಾಸಿಯಲ್ಲಿರುವ ಈ ಮೂರ್ತಿ ಸರಳ ರೀತಿಯಲ್ಲಿದೆ. ಮೇಲಿನ ಬಲಗೈಯಲ್ಲಿ ಹಿಡಿದ ಆಯುಧ ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಬೆರಳನ್ನು ಮಡಚಿದ ರೀತಿ ಇದೆ. ಕೆಳ ಎಡಗೈಯಲ್ಲಿ ಮೋದಕ ಪಾತ್ರೆ ಇದೆ. ಕೈಗಳಲ್ಲಿ ಕಡಗವಿದ್ದು, ಕಾಲ್ಗಡಗ, ಯಜ್ಞೋಪವೀತಗಳಿವೆ. ಈ ಮೂರ್ತಿಯು ಕಲ್ಯಾಣಿ ಚಾಲುಕ್ಯ ಶೈಲಿಯನ್ನು ಹೋಲುವುದರಿಂದ ಅವರ ಅಧೀನದಲ್ಲಿ ನಿರ್ಮಾಣವಾಗಿರಬಹುದೆಂದು ಹೇಳಬಹುದು.

| | |
|---|---|
| ಗ್ರಾಮ : ಹಲುವಾಗಲು | ಶೈಲಿ : ಕಲ್ಯಾಣಿ ಚಾಲುಕ್ಯ |
| ಸ್ಥಳ : ಆಂಜನೇಯ ದೇವಸ್ಥಾನ(ಕೋಟೆ ಬಾಗಿಲು) | ಅಭಿಮುಖ : ದಕ್ಷಿಣಾಭಿಮುಖ |
| ಸ್ಮಾರಕ : ಗಣಪತಿ | ಸ್ಥಿತಿ : ಉತ್ತಮ |
| ಕಾಲ : ಕ್ರಿ.ಶ.೧೨ನೇ. ಶತಮಾನ | ಪಂಥ : ಶೈವ |

ಗಣಪತಿಯು ಸುಕನಾಸಿ ಭಂಗಿಯಲ್ಲಿ ಚತುರ್ಭುಜನಾಗಿ ಕುಳಿತಿದ್ದಾನೆ. ನಾಲ್ಕು ಕೈಗಳಲ್ಲಿ ಆಯುಧಗಳನ್ನು ಹಿಡಿದಿದ್ದು, ಬಲಗೈಯಲ್ಲಿ ಪಟವನ್ನು ಹಿಡಿದಿದೆ. ಕೆಳಭಾಗದ ಕೈ ಅಭಯ ಹಸ್ತವಾಗಿದ್ದು, ಎಡಭಾಗದ ಕೈಯಲ್ಲಿ ತ್ರಿಶೂಲವನ್ನು ಹಿಡಿದುಕೊಂಡಿದೆ. ಕೆಳಭಾಗದ ಕೈಯಲ್ಲಿ ಒಂದು ಪಾತ್ರೆಯನ್ನು ಹಿಡಿದುಕೊಂಡಿದ್ದು, ಈ ಮೂರ್ತಿ ಆನೆಯ ಕಿವಿಯಂತೆ ಅಗಲವಾದ ಕಿವಿಗಳು, ಎಡಭಾಗಕ್ಕೆ ಬಾಗಿರುವ ಸೊಂಡಿಲು, ಪಾತ್ರೆಯನ್ನು ಹಿಡಿದಂತೆ ಇದೆ.

ಎರಡು ಕಡೆಯಲ್ಲಿ ಸ್ವಲ್ಪ ಮಟ್ಟಿನ ದಂತವಿದ್ದು, ಗಣಪತಿಯು ಕಿರೀಟ ಮುಕುಟವನ್ನು ಧರಿಸಿದ್ದಾನೆ. ಕೊರಳಲ್ಲಿ ಹಾರ, ಕಂಠೀಪದಕ ಹಾರ, ಯಜ್ಞೋಪವೀತ ಧರಿಸಿದ್ದಾನೆ. ಉದರ ಬಂಧನವಿದೆ. ಹೊಟ್ಟೆಗೆ ಸುತ್ತಿಕೊಂಡಿರುವ ಸರ್ಪವಿದ್ದು, ಕೈಗೆ ಕಡಗ, ಭುಜಬಂಧ, ವಾಜೀ ಬಂಧಗಳಿವೆ. ಶಕ್ತಿ ದೇವತೆ

ಗಳು ಆಗಲವಾದ ಹಾರ ಮುಕುಟಕ್ಕೆ ಕಿರೀಟ-ವೈಜಂತಿಹಾರ ಧರಿಸಿದ್ದಾರೆ. ಹಿಂಭಾಗದಲ್ಲಿ ಪ್ರಭಾವಳಿಯಂತೆ ಕೆತ್ತಲಾಗಿದೆ. ಒಟ್ಟಾರೆಯಾಗಿ ನೋಡಲು ಬಹಳ ಸುಂದರವಾದ ರೀತಿಯಲ್ಲಿ ಕಂಡುಬರುತ್ತದೆ.

## ವೈಷ್ಣವ ಮೂರ್ತಿಶಿಲ್ಪಗಳು

ಯಜ್ಞಯಾಗಾದಿಗಳಿಗೆ ವರ್ಣಾಶ್ರಮಕ್ಕೆ ಪ್ರಾಧಾನ್ಯತೆ ಕೊಟ್ಟಿದ್ದ ವೈದಿಕ ಧರ್ಮವು ಅಕ್ಕ-ಪಕ್ಕದಲ್ಲಿ ಅದಕ್ಕೆ ಭಿನ್ನವಾದ ಇನ್ನೊಂದು ಧರ್ಮ ಭಾಗವತ ಧರ್ಮ. ಈ ಧರ್ಮದ ಸ್ಥಾಪಕ ಕ್ಷತ್ರಿಯನಾದ, ಶ್ರೀಕೃಷ್ಣ, ತಮ್ಮ ಆರಾಧ್ಯ ದೈವವನ್ನು ಭಾಗವತ ಎಂದು ಹೇಳಲಾಗಿದೆ. ಈ ಅನುಯಾಯಿಗಳು ಭಾಗವತರೆಂದು ಕರೆದರು. ಈ ಅನುಯಾಯಿಗಳು ಕೃಷ್ಣನಿಗೆ ದೈವಪಟ್ಟ ಕಟ್ಟಿದರು. ಅವನೇ ಒಂದು ಅವತಾರವೆಂದು ಭಾವಿಸಿದರು. ಇದೇ ವೈಷ್ಣವ ಧರ್ಮ ವಿಷ್ಣುವೇ ವರಿಷ್ಟ ದೇವತೆ ಎಂದು ಹೇಳಲಾಗಿದೆ.[೩೭]

ಬ್ರಾಹ್ಮಣಗಳಲ್ಲಿ ಅಸುರರ ವಿರುದ್ಧ ಹೋರಾಡಲು ದೇವತೆಗಳಿಗೆ ಸಹಾಯ ಮಾಡುವವನನ್ನು ವಿಷ್ಣು ಎಂದು ಹೇಳಲಾಗಿದೆ. (ಭಂಡಾರಕರ್ ಆರ್.ಜಿ.ಪು.೪೭) ಈ ವೈಷ್ಣವ ಪಂಥಕ್ಕೆ ಸಂಬಂಧಿಸಿದಂತೆ ಹಲವಾರು ಮೂರ್ತಿಶಿಲ್ಪಗಳು ನೀಲಗುಂದ ಪರಿಸರದಲ್ಲಿ ಕಂಡುಬರುತ್ತವೆ. ಅವುಗಳೆಂದರೆ ಲಕ್ಷ್ಮೀ ನಾರಾಯಣ, ಅನಂತಶಯನ, ಉಗ್ರನರಸಿಂಹ, ಗುಡ್ಡದ ತಿಮ್ಮಪ್ಪ, ಹಲುವಾಗಲು ಕೇಶವ, ಇನ್ನು ಮುಂತಾದ ವೈಷ್ಣವ ಮೂರ್ತಿಗಳನ್ನು ಈ ಪರಿಸರದಲ್ಲಿ ಹೆಸರಿಸಿದೆ. ಈ ವೈಷ್ಣವ ಪಂಥಕ್ಕೆ ಸೇರಿದ ಆಯ್ದ ಮೂರ್ತಿಶಿಲ್ಪಗಳನ್ನು ಇಲ್ಲಿ ವಿವರಿಸಲಾಗಿದೆ.

| | |
|---|---|
| **ಗ್ರಾಮ : ನೀಲಗುಂದ** | **ಶೈಲಿ : ಕಲ್ಯಾಣಿ ಚಾಲುಕ್ಯ** |
| **ಸ್ಥಳ : ಪ್ರಸ್ತುತ ಭೀಮೇಶ್ವರ ದೇವಾಲಯದಲ್ಲಿ** | **ಅಭಿಮುಖ : ಪೂರ್ವಾಭಿಮುಖ** |
| **ಸ್ಮಾರಕ : ಲಕ್ಷ್ಮೀನಾರಾಯಣ** | **ಸ್ಥಿತಿ : ಕನಿಷ್ಠ** |
| **ಕಾಲ : ಕ್ರಿ.ಶ.೧೧ನೇ. ಶತಮಾನ** | **ಪಂಥ : ವೈಷ್ಣವ** |

ಈ ಮೂರ್ತಿಯು ಚತುರ್ಭುಜಧಾರಿಯಾದ ಲಕ್ಷ್ಮೀನಾರಾಯಣನದಾಗಿದ್ದು, ಮೂರ್ತಿ ಪೀಠದ ಮೇಲೆ ಲಲಿತಾಸನದಲ್ಲಿ ಕುಳಿತಿದ್ದು, ಎಡ ತೊಡೆಯ ಮೇಲೆ ಲಕ್ಷ್ಮಿ ಕುಳಿತಿದ್ದಾಳೆ. ನಾರಾಯಣ ಮೂರ್ತಿ ಕಿರೀಟದ ಹಿಂಬದಿಯಲ್ಲಿ ಶಿರಶ್ಚಕ್ರವಿದ್ದು, ಕಿವಿಯಲ್ಲಿ ಮಕರ ಕುಂಡಲಗಳಿವೆ. ಕೊರಳಲ್ಲಿ ಕಂಠಾಭರಣ ಕೊರಳಹಾರ, ಉದರ ಬಂಧ ಹಾಗೂ ಯಜ್ಞೋಪವೀತವಿದೆ. ಭುಜಕೀರ್ತಿ ಕೇಯೂರ ಕೈಕಡಗಗಳಿದ್ದು, ಮಣಿಸರದಿಂದ ಅಲಂಕರಿಸಲಾದ ಬಟ್ಟೆಯು ಕಾಲ ಕೆಳಗಿನಿಂದ ಇಳಿಬಿದ್ದಂತಿದೆ. ವೈಜಯಂತಿಹಾರ ದಪ್ಪನೆಯ ಕಾಲ್ಗಡಗ ಹಾಗೂ ಬೆರಳಿನಲ್ಲಿ ಉಂಗುರಗಳಿವೆ. ನಾರಾಯಣ ತೊಡೆಯ ಮೇಲೆ ಕುಳಿತ ದೇವಿ (ಲಕ್ಷ್ಮಿ) ಕಿರೀಟ ಮುಖಿಯಾಗಿದ್ದು, ಕಿವಿಯಲ್ಲಿ ಚಕ್ರಕುಂಡಲ ಕೊರಳಲ್ಲಿ ಕಂಠಾಭರಣ ಹಾಗೂ ಕುಂಚ ಬಂಧಗಳನ್ನು ಧರಿಸಿದ್ದಾಳೆ.[೩೮] ದ್ವಿಭುಜದಾರಿಣೇ ಲಕ್ಷ್ಮಿಯು ತನ್ನ ಬಲಗೈಯಿಂದ ವಿಷ್ಣುವಿನ

ಬಲಭುಜವನ್ನು ಹಿಡಿದಿದ್ದು, ಎಡಗೈ ಮಧ್ಯಭಾಗಕ್ಕೆ ತ್ರುಟಿತವಾಗಿದೆ. ಮಣಿಸರದಿಂದ ಅಲಂಕೃತವಾದ ಸೀರೆ ಇದ್ದು, ಕಾಲಿನಲ್ಲಿ ದಪ್ಪನೆಯ ಕಡಗ ಹಾಗೂ ಪಾದಸರಗಳಿವೆ. ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಸೇರಿದ ಈ ಮೂರ್ತಿಯು ಉತ್ತಮ ರೀತಿಯಲ್ಲಿ ಅಲಂಕೃತಗೊಂಡಿದ್ದು, ಕಣ್ಮನಗಳನ್ನು ಸೆಳೆಯುತ್ತದೆ.

| | |
|---|---|
| **ಗ್ರಾಮ :** ನೀಲಗುಂದ | **ಶೈಲಿ :** ಕಲ್ಯಾಣಿ ಚಾಲುಕ್ಯ |
| **ಸ್ಥಳ :** ಅನಂತಶಯನ ದೇವಾಲಯ | **ಅಭಿಮುಖ :** ಪೂರ್ವಾಭಿಮುಖ |
| **ಸ್ಮಾರಕ :** ಅನಂತಶಯನ | **ಸ್ಥಿತಿ :** ಕನಿಷ್ಠ |
| **ಕಾಲ :** ಕ್ರಿ.ಶ.೧೧ನೇ. ಶತಮಾನ | **ಪಂಥ :** ವೈಷ್ಣವ |

ಈ ಮೂರ್ತಿಯು ದೇವಾಲಯದ ಗರ್ಭಗೃಹದಲ್ಲಿ ಸರ್ಪದ ಮೇಲೆ ಬೃಹದಾಕಾರವಾದ ಕಲ್ಲಿನಿಂದ ಕೆತ್ತಿದ ಹಾಗೂ ಒಂದೇ ಕರಿ ಶಿಲೆಯಲ್ಲಿ ಕೆತ್ತಿದ ಅನಂತಶಯನ ವಿಷ್ಣುಮೂರ್ತಿಯಾಗಿದ್ದು, ವಿಷ್ಣುವು ಅನಂತನ ಮೇಲೆ ಕಾಲು ಚಾಚಿ ಮುಗ್ಗುಲಿನಿಂದ ಮಲಗಿದ್ದಾನೆ. ಈ ಮೂರ್ತಿ ದ್ವಿಭುಜಧಾರಿಯಾಗಿದೆ. ವಿಷ್ಣು ತನ್ನ ಬಲಗೈಯನ್ನು ಮಡಚಿ ತನ್ನ ತಲೆಗೆ ಆಧಾರವಾಗಿಟ್ಟುಕೊಂಡಂತೆ, ಎಡ ಕೈಯನ್ನು ಎಡ ತೊಡೆ ಮೇಲೆ ಚಾಚಿರುವ ರೀತಿಯಲ್ಲಿ ಶಿಲ್ಪ ಕೆತ್ತಿದ್ದಾರೆ.

ಎಡಗಾಲು ತ್ರುಟಿತವಾಗಿದೆ. ಇಲ್ಲಿ ಬ್ರಹ್ಮ ಭೂದೇವಿಯರು ಇಲ್ಲಿ ಕಂಡುಬರುವುದಿಲ್ಲ. ಕಿರೀಟ ಮುಕುಟಧಾರಿಯಾದ ಈ ಮೂರ್ತಿಯು ಕಿವಿಯೋಲೆ, ಕಂಠಹಾರ, ಯಜ್ಞೋಪವೀತವನ್ನು ಧರಿಸಿದೆ. ಈ ಮೂರ್ತಿಯ ಲಕ್ಷಣಗಳ ಆಧಾರದ ಮೇಲೆ ಕಲ್ಯಾಣ ಚಾಲುಕ್ಯರ ಕಾಲದೆಂದು ಹೇಳಬಹುದು.

| | |
|---|---|
| **ಗ್ರಾಮ :** ನೀಲಗುಂದ | **ಶೈಲಿ :** ಕಲ್ಯಾಣಿ ಚಾಲುಕ್ಯ |
| **ಸ್ಥಳ :** ಭೀಮೇಶ್ವರ ದೇವಾಲಯದ ಹೊರಗೆ | **ಅಭಿಮುಖ :** ಪಶ್ಚಿಮಾಭಿಮುಖ |
| **ಸ್ಮಾರಕ :** ಉಗ್ರನರಸಿಂಹ | **ಸ್ಥಿತಿ :** ಕನಿಷ್ಠ |
| **ಕಾಲ :** ಕ್ರಿ.ಶ.೧೧ನೇ. ಶತಮಾನ | **ಪಂಥ :** ವೈಷ್ಣವ |

ಈ ಮೂರ್ತಿ ಆರು ಕೈಗಳನ್ನು ಹೊಂದಿದ್ದು ಪೀಠದ ಮೇಲೆ ಅಲೀಡ ಭಂಗಿಯಲ್ಲಿ ಸ್ಥಾನಿಕವಾಗಿದೆ. ಮನುಷ್ಯ ದೇಹ ಸಿಂಹ ಮುಖಧಾರಿಯಾಗಿರುವ ಈ ಮೂರ್ತಿಯು ಕಿರೀಟ ಧರಿಸಿದೆ. ಕೊರಳಲ್ಲಿ ವಿಭಿನ್ನ ಬಗೆಯ ಹಾರಗಳಿದ್ದು, ಯಜ್ಞೋಪವೀತ ಮತ್ತು ಎರಡು ಕಾಲಿನ ಮಧ್ಯ ಇಳಿಬಿದ್ದ ವೈಜಯಂತಿ ಹಾರವಿದೆ. ಮೊಣಕೈಯಿಂದ ಉಳಿದ ಭಾಗಗಳು ತ್ರುಟಿತವಾಗಿರುವುದರಿಂದ ಕೈಗಳಲ್ಲಿ ಹಿಡಿದ ಆಯುಧಗಳು ಗೋಚರಿಸುವುದಿಲ್ಲ. ಭುಜಕೀರ್ತಿ ಕೇಯೂರಗಳಿವೆ. ತನ್ನ ಎಡಗಾಲನ್ನು ಮಡಚಿ ಅದರ ಮೇಲೆ ಹಿರಣ್ಯ ಕಶ್ಯಪ್ಪನನ್ನು ಮಲಗಿಸಿಕೊಂಡು ಉದರ ಬಗೆದು ಕರುಳನ್ನು ಹೊರ ತೆಗೆಯುತ್ತಿರುವ ರೀತಿಯಲ್ಲಿ ಕೆತ್ತಲಾಗಿದೆ. ತಲೆಯ ಭಾಗ ಮತ್ತು ಮೊಣಕಾಲಿನ ಕೆಳಭಾಗ ತ್ರುಟಿತವಾಗಿರುವುದರಿಂದ ಈ ಮೂರ್ತಿಯ ಅಧ್ಯಯನ ಪರಿಪೂರ್ಣವಾಗಲಾರದು. ಕಾಲಿನಲ್ಲಿ ದಪ್ಪನೆಯ ಕಾಲ್ಗಡಗಗಳಿವೆ. ಎಡಭಾಗದಲ್ಲಿ ಪ್ರಹ್ಲಾದ ಅಂಜಲಿಬದ್ಧನಾಗಿ ನಿಂತಿದ್ದಾನೆ. ಪೀಠಬಿಂಬದಲ್ಲಿ ಗರುಡನ ನಶಿಸಿದ ಶಿಲ್ಪವಿದೆ.

ಗ್ರಾಮ : ನೀಲಗುಂದ

ಸ್ಥಳ : ಉತ್ತರ ದಿಕ್ಕಿನ ಗುಡ್ಡದ ಮೇಲೆ

ಸ್ಮಾರಕ : ತಿಮ್ಮಪ್ಪ

ಕಾಲ : ಕ್ರಿ.ಶ.೧೧ನೇ. ಶತಮಾನ

ಶೈಲಿ : ಕಲ್ಯಾಣಿ ಚಾಲುಕ್ಯ

ಅಭಿಮುಖ : ಪೂರ್ವಾಭಿಮುಖ

ಸ್ಥಿತಿ : ಉತ್ತಮ

ಪಂಥ : ವೈಷ್ಣವ

ಪೀಠದ ಮೇಲೆ ಸುಖನಾಸಿಯಲ್ಲಿರುವ ಈ ಮೂರ್ತಿ ಪೂರ್ವಕ್ಕೆ ಅಭಿಮುಖವಾಗಿದೆ. ಚೌಕಾಕಾರದ ಕಲ್ಲಿನ ಒಂದು ಅಡಿ ಎತ್ತರ ಪೀಠದ ಮೇಲೆ ಸುಮಾರು ಮೂರು ಅಡಿ ಎತ್ತರವಿದ್ದು, ಒಂದೂವರೆ ಅಡಿ ಅಗಲವನ್ನು ಹೊಂದಿದೆ. ಇದಕ್ಕೆ ಕಪ್ಪು ಶಿಲೆಯನ್ನು ಬಳಸಲಾಗಿದೆ. ಈ ತಿಮ್ಮಪ್ಪನ ಮೂರ್ತಿಯು ನಾಲ್ಕು ಕೈಗಳನ್ನು ಹೊಂದಿದ್ದು, ಬಲಭಾಗದ ಕೈಯಲ್ಲಿ ಚಕ್ರವನ್ನು, ಶಂಖ ಮತ್ತು ಕೆಳಭಾಗದ ಕೈಯಲ್ಲಿ ಅಭಯ ಮುದ್ರೆ ಇದೆ(ಆರ್ಶೀವಾದ ಮಾಡುವ ದೃಶ್ಯ). ಎಡಭಾಗದ ಕೈಯಲ್ಲಿ ಸಾಮಾನ್ಯವಾದ ಆಯುಧ ಹಿಡಿದಿರುವುದು. ಕೆಳಗಿನ ಕೈಯಲ್ಲಿ ಗದೆಯನ್ನು ಹಿಡಿದುಕೊಂಡಿರುವುದು ನಿಂತಭಂಗಿಯಲ್ಲಿ ಸುಂದರವಾದ ರೀತಿಯಲ್ಲಿ ಸೂಕ್ಷ್ಮವಾದ ರೀತಿಯಲ್ಲಿ ನಿರ್ಮಾಣವಾಗಿದೆ. ಅಲ್ಲದೆ ಪಕ್ಕದಲ್ಲಿ ದೇವಕನ್ನಿಕೆಯರು ನಿಂತಿರುವ ದೃಶ್ಯವಿದೆ. ಉಳಿದಂತೆ ಸರಳವಾಗಿರುವುದರಿಂದ ಈ ಮೂರ್ತಿಯು ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ರಚನೆಯಾಗಿರಬಹುದೆಂದು ಊಹಿಸಲಾಗಿದೆ.

ಗ್ರಾಮ : ಹಲುವಾಗಲು

ಸ್ಥಳ : ಕಲ್ಲೇಶ್ವರ ದೇವಾಲಯ

ಸ್ಮಾರಕ : ಕೇಶವ

ಕಾಲ : ಕ್ರಿ.ಶ.೧೨ನೇ ಶತಮಾನ

ಶೈಲಿ : ಕಲ್ಯಾಣಿ ಚಾಲುಕ್ಯ

ಅಭಿಮುಖ : ದಕ್ಷಿಣಾಭಿಮುಖ

ಸ್ಥಿತಿ : ಉತ್ತಮ

ಪಂಥ : ವೈಷ್ಣವ

ಚತುರ್ಭುಜಧಾರಿಯಾದ ಈ ಮೂರ್ತಿ ಸಮಭಂಗಿಯಲ್ಲಿ ನಿಂತಿದೆ. ಕಿರೀಟ ಮುಕುಟ ದಾರಿಯಾದ ಮೂರ್ತಿಯು ಹಿಂಭಾಗದಲ್ಲಿ ಶಿರಶ್ಚಕ್ರ ಹೊಂದಿದ್ದು, ತಲೆಗೂದಲು ಎರಡು ಭುಜದ ಮೇಲೆ ಇಳಿಬಿದ್ದಿವೆ. ಕಿವಿಯಲ್ಲಿ ಸರ್ಪ ಕುಂಡಲಗಳಿದ್ದು, ಕೊರಳಲ್ಲಿ ಅನೇಕ ಬಗೆಯ ಹಾರಗಳಿವೆ. ಉದರಬಂಧನ ಯಜ್ಞೋಪವೀತ, ಕೈಗಳಲ್ಲಿ ಕೇಯೂರ ಕಡಗಗಳಿವೆ. ಮೇಲಿನ ಕೈಗಳಲ್ಲಿ ಶಂಖ ಚಕ್ರಗಳಿದ್ದು, ಕೆಳಗಿನ ಬಲಗೈ ಮುಂಗೈಭಾಗ ಹಾಗೂ ಎಡಗೈ ತ್ರುಟಿತವಾಗಿದೆ. ಕಾಲಿನಲ್ಲಿ ಕಡಗಗಳಿದ್ದು, ಕಾಲಿನ ಬಳಿ ಚಾಮರಧಾರಿ ಸ್ತ್ರೀ ಶಿಲ್ಪಗಳಿವೆ. ಸರ್ಪ ತೋರಣಯುಕ್ತ ಪ್ರಭಾವಳಿಯಿದ್ದು, ಕೆಳಗಿನ ಪೀಠಬಿಂಬದಲ್ಲಿ ಗರುಡ ಪದ್ಮಾಸನದಲ್ಲಿದ್ದು, ಅಂಜಲಿಬದ್ಧನಾಗಿದ್ದಾನೆ. ಈ ಕೇಶವ ಮೂರ್ತಿಯು ಕಲ್ಯಾಣ ಚಾಲುಕ್ಯರ ಶಿಲ್ಪ ಶೈಲಿಗೆ ಹೋಲಿಕೆಯಾಗಿರುವುದರಿಂದ ಅವರ ಕಾಲದ್ದೆಂದು ಹೇಳಬಹುದು.

ಗ್ರಾಮ : ಹಲುವಾಗಲು

ಸ್ಥಳ : ಗ್ರಾಮದ ಮಧ್ಯಭಾಗ

ಸ್ಮಾರಕ :. ಆಂಜನೇಯ ದೇವಾಲಯ

ಅಭಿಮುಖ : ದಕ್ಷಿಣಾಭಿಮುಖ

ಸ್ಥಿತಿ : ಉತ್ತಮ

ಪಂಥ : ವೈಷ್ಣವ

ಈ ಮೂರ್ತಿಯು ನಿಂತ ಭಂಗಿಯಲ್ಲಿದೆ. ಎಡಗಡೆ ಮುಖ ಮಾಡಿಕೊಂಡಿರುವುದು ಸಾಮಾನ್ಯವಾಗಿದೆ. ಸುಮಾರು ೫ ಅಡಿ ಎತ್ತರವಾಗಿದೆ. ಈ ಮೂರ್ತಿಯು ಎರಡು ಕೈಗಳನ್ನು ಹೊಂದಿದ್ದು, ಎಡಗೈಯನ್ನು ಸೊಂಟಕ್ಕೆ ಹಿಡಿದುಕೊಂಡಿದೆ. ಬಲಗೈ ಮೇಲಕ್ಕೆ ಹಿಡಿದು ಅಭಯ ಹಸ್ತದಿಂದ ಕೂಡಿದೆ. ಆಂಜನೇಯನ ಬಾಲವು ತನ್ನ ತಲೆಯಿಂದ ಮುಂಭಾಗವಾಗಿ ಸೊಂಟದವರೆಗೂ ದಾಟಿದೆ. ಬಾಲದ ಹಿಂದೆ ಗೆಜ್ಜೆಯ ಸರಪಣಿ ಅಲಂಕೃತವಾಗಿದೆ. ಕೈಗಳಲ್ಲಿ ತೋಳುಬಂದಿ, ವಾಜಿಬಂಧ, ಕಂಕಣ, ಕೊರಳಲ್ಲಿ ಮಣಿಸರ, ಮುತ್ತಿನಹಾರ, ಲಂಗೋಟಿ, ಕಿರೀಟವನ್ನು ಹೊಂದಿದೆ. ಅಲ್ಲದೇ ದೋತ್ರ ಧರಿಸಿದೆ. ಇವು ಈ ಮೂರ್ತಿಶಿಲ್ಪದ ಲಕ್ಷಣಗಳು. ಅದರ ಮೇಲ್ಭಾಗದಲ್ಲಿ ಕಾಲ್ಗಡವನ್ನು ಧರಿಸಿ ನೋಡಲಿಕ್ಕೆ ಬಹಳ ಸುಂದರ(ಅಲಂಕಾರ) ಕೆತ್ತನೆಯನ್ನು ಮಾಡಿರುವುದು ಕಂಡುಬರುತ್ತದೆ.

### ಶಾಕ್ತಮೂರ್ತಿಶಿಲ್ಪಗಳು

ಈ ಜಗತ್ತಿನ ಸೃಷ್ಟಿಕರ್ತ ಬ್ರಹ್ಮ, ಸ್ಥಿತಿಕರ್ತೃ ವಿಷ್ಣು, ಪ್ರಳಯ ಕರ್ತೃ ಶಿವನ ಪಾಲಾದರೆ ಸಮಸ್ತ ಸೃಷ್ಟಿಗೆ ಮೂಲಧಾರ ಕರ್ತೃ ಶಕ್ತಿ ಎಂಬುವುದನ್ನು ಮರೆಯುವಂತಿಲ್ಲ. ಆ ಶಕ್ತಿಯೇ ದೇವಿ. ದೇವಿ ಸೃಷ್ಟಿ ಮಾಡಲು ಮಹಾಕಾಳಿಯಾಗಿ, ಐಶ್ವರ್ಯ ನೀಡಲು ಲಕ್ಷ್ಮಿಯಾಗಿ, ಜ್ಞಾನ ನೀಡಲು ಸರಸ್ವತಿಯಾಗಿ, ಅಸುರರನ್ನು, ದುಷ್ಟರನ್ನು ಸಂಹಾರ ಮಾಡಲು ರೌದ್ರಳಾಗಿ ಅವತಾರವೆತ್ತಿದ್ದಾಳೆ. ದೇವಿಯ ವರ್ಣನೆಯನ್ನು ಮಾರ್ಕಾಂಡೇಯ ಪುರಾಣದ ದೇವಿಯ ಮಹಾತ್ಮೆಯನ್ನು ಉಲ್ಲೇಖಿಸಲ್ಪಟ್ಟಿದೆ.[೩೭] ಮಾತೃ ದೇವತೆಯ ಶಾಕ್ತ ಸಂಪ್ರದಾಯಕ್ಕೆ ಮೂಲಾಧಾರ ಎಲ್ಲ ಹೆಸರು ದೇವತಾ ಸ್ವರೂಪರು ಎಂಬುವುದು ಮಾತೃ ದೇವತೆಯ ಕಲ್ಪನೆಗೆ ಎಡೆಮಾಡಿಕೊಟ್ಟಿದೆ.

ಶಿವ, ವಿಷ್ಣು, ಬ್ರಹ್ಮ ಇವರಿಗೆ ಹಲವಾರು ಸ್ವರೂಪಗಳು ಇರುವಂತೆ (ರೂಪಗಳಿರುವಂತೆ) ಈ ಶಕ್ತಿ ದೇವತೆಗೂ ಹಲವಾರು ರೂಪಗಳು ಇದೆ. ಪ್ರಸ್ತುತ ಅಧ್ಯಯನ ನೀಲಗುಂದ ಪರಿಸರದಲ್ಲಿ ಬರುವ ಮೂರ್ತಿಶಿಲ್ಪಗಳಲ್ಲಿ ಮುಖ್ಯವಾಗಿ ನೀಲಗುಂದದ ಮಹಿಷಾಸುರ ಮರ್ಧಿನಿ. ಇಂತಹ ಮೂರ್ತಿ ಶಿಲ್ಪಗಳಲ್ಲಿ ಕಂಡುಬರುವ ಲಕ್ಷಣಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಗ್ರಾಮ : ನೀಲಗುಂದ
ಸ್ಥಳ : ಭೀಮೇಶ್ವರ
ಸ್ಮಾರಕ : ಮಹಿಷಾಸುರ ಮರ್ದಿನಿ
ಕಾಲ : ಕ್ರಿ.ಶ.೧೧ನೇ ಶತಮಾನ
ಶೈಲಿ : ಕಲ್ಯಾಣಿ ಚಾಲುಕ್ಯ
ಅಭಿಮುಖ : ಪೂರ್ವಾಭಿಮುಖ
ಸ್ಥಿತಿ : ಕನಿಷ್ಠ
ಶಿಲೆ : ಕಪ್ಪು ಶಿಲೆ

ಈ ಮೂರ್ತಿಯು ಭೀಮೇಶ್ವರ ದೇವಾಲಯದ ನವರಂಗದ ಉತ್ತರ ದಿಕ್ಕಿನ ಭಿತ್ತಿ ಕೋಷ್ಠದಲ್ಲಿ ಮಹಿಷಾಸುರ ಮರ್ದಿನಿ ಮೂರ್ತಿಯನ್ನು ನಿಲ್ಲಿಸಲಾಗಿದೆ. ಈ ಮೂರ್ತಿಯು ಒಂದುವರೆ ಅಡಿ ಎತ್ತರ ಒಂದು ಅಡಿ ಅಗಲವನ್ನು ಹೊಂದಿದೆ. ಈ ದೇವತೆ ಕೋಣನ ತಲೆಯನ್ನು ತನ್ನ ಎಡಗೈಯಿಂದ ಹಿಡಿದು

ಬಲಗೈಯಲ್ಲಿ ತ್ರಿಶೂಲದಿಂದ ಇರಿಯುತ್ತಿರುವ ದೃಶ್ಯವಿದೆ. ಕಿರೀಟ ಮುಕುಟಧಾರಿಯಾದ ಈ ಮೂರ್ತಿಯು ಚತುರ್ಭುಜದಾರಿಯಾಗಿದ್ದು, ಕಿವಿಯಲ್ಲಿ ಚಕ್ರ ಕುಂಡಲಗಳಿವೆ. ಹಾಗೆಯೇ ಕೊರಳಲ್ಲಿ ವಿವಿಧ ಬಗೆಯ ಹಾರಗಳಿದ್ದು ಕೈಗಳಲ್ಲಿ ಕೈಯೂರ ಕಡಗಗಳಿವೆ. ಮೇಲಿನ ಕೈಗಳಲ್ಲಿ ಶಂಖ, ಚಕ್ರ, ಕೆಳಗಿನ ಬಲಗೈಯಲ್ಲಿ ತ್ರಿಶೂಲವು ಕೋಣನಿಂದ ಉದಯಿಸಿದ ಅರಸನಿಗೆ ತಾಗಿದ ರೀತಿಯಲ್ಲಿದೆ. ಎಡಗೈಯಿಂದ ಆತನ ತಲೆಯನ್ನು ಹಿಡಿದುಕೊಂಡಿದ್ದು, ಅಲೀಡ್ ಗಂಭೀರ ಭಂಗಿಯಲ್ಲಿ ಇರುವ ಈ ಮೂರ್ತಿಯು ಎಡಗಾಲು ಅಸುರನ ಎದೆಯ ಬಳಿ ಇದೆ. ಬಲಗಾಲು ಪೀಠದ ಮೇಲಿದ್ದು ಸುತ್ತಲು ಪ್ರಭಾವಳಿಯನ್ನು ಹೊಂದಿದೆ. ಇದರಲ್ಲಿ ದೇವಿಯ ವಾಹನವಾದ ಸಿಂಹ ಶಿಲ್ಪವು ಬಹಳ ಸುಂದರವಾಗಿದೆ. ಶಿಲ್ಪವು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿಬಹುದೆಂದು ಊಹಿಸಲಾಗಿದೆ.

ಗ್ರಾಮ : ನೀಲಗುಂದ — ಶೈಲಿ : ಕಲ್ಯಾಣಿ ಚಾಲುಕ್ಯ

ಸ್ಥಳ : ಭೀಮೇಶ್ವರ ದೇವಾಲಯ — ಅಭಿಮುಖ : ಪೂರ್ವಾಭಿಮುಖ

ಸ್ಮಾರಕ : ಸಪ್ತಮಾತೃಕೆಯರು — ಸ್ಥಿತಿ : ಕನಿಷ್ಠ

ಕಾಲ : ಕ್ರಿ.ಶ.೧೧ನೇ ಶತಮಾನ

ಈ ಮೂರ್ತಿಯು ಭೀಮೇಶ್ವರ ದೇವಾಲಯದಲ್ಲಿ ದಕ್ಷಿಣದ ಭಾಗದ ಗೋಡೆಯಲ್ಲಿ ಉತ್ತರಕ್ಕೆ ಅಭಿಮುಖವಾಗಿದೆ. ಪಕ್ಕದಲ್ಲಿ ಗವಿಯು ಕಂಡುಬರುತ್ತದೆ. ಸಣ್ಣ ಸಣ್ಣ ಕೋಷ್ಠಗಳಲ್ಲಿ ಸಪ್ತ ಮಾತೃಕೆಯರ ಮೂರ್ತಿಗಳನ್ನು ಕಾಣಬಹುದು. ಈ ಮೂರ್ತಿಗಳು ದೇವಾಲಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಈ ಮೂರ್ತಿ ಒಂದು ಅಡಿ ಎತ್ತರ ೨ ಅಡಿ ಅಗಲವನ್ನು ಹೊಂದಿರುತ್ತದೆ. ಕೆಲವು ಸ್ಥಳದಲ್ಲಿ ಸ್ವತಂತ್ರ ಪೂಜೆಗೊಂಡರೆ, ಇಲ್ಲಿ ಯಾವಾಗಲೋ ಒಂದು ಸಲ ಪೂಜೆ ಮಾಡಲಾಗುವುದು. ಈ ಮೂರ್ತಿಯನ್ನು ಅನೇಕ ಹೆಸರುಗಳಿಂದ ಕರೆಯುವುಂಟು. ದೇವಕನ್ನೆಯರೆಂದೂ ಅಥವಾ ಅಮ್ಮನವರೆಂದು ಕರೆಯುವುದು ರೂಢಿಯಾಗಿದೆ. ಈ ವಿಗ್ರಹಗಳು ಸಾಮಾನ್ಯ ಒಂದೇ ಗಾತ್ರ ಮತ್ತು ಅಂಗಗಳ ವಿನ್ಯಾಸ ಹೊಂದಿರುತ್ತದೆ.

ಈ ಮೂರ್ತಿಯು ದೇವಾಲಯ ನಿರ್ಮಾಣವಾದ ಕಾಲದಲ್ಲಿ ಅಂದರೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಹೇಳಲಾಗಿದೆ.

ಗ್ರಾಮ : ನೀಲಗುಂದ — ಶೈಲಿ : ಕಲ್ಯಾಣಿ ಚಾಲುಕ್ಯ

ಸ್ಥಳ : ಭೀಮೇಶ್ವರ ದೇವಾಲಯ — ಅಭಿಮುಖ : ಪೂರ್ವಾಭಿಮುಖ

ಸ್ಮಾರಕ : ಸರಸ್ವತಿ — ಸ್ಥಿತಿ : ಕನಿಷ್ಠ

ಕಾಲ : ಕ್ರಿ.ಶ.೧೧ನೇ ಶತಮಾನ

ಪೀಠದ ಮೇಲೆ ಪದ್ಮಾಸನದಲ್ಲಿ ಆಸೀನವಾಗಿರುವ ಈ ಮೂರ್ತಿಯು ಕಿರೀಟ ಮುಕುಟಧಾರಿ ಯಾಗಿದ್ದು, ಕಿವಿಯಲ್ಲಿ ಚಕ್ರ ಕುಂಡಲ ಶಿರಶ್ಚಕ್ರವಿದೆ. ಕೊರಳಲ್ಲಿ ಕಂಠಾಭರಣ, ಕೊರಳಲ್ಲಿ ಸರವಿದ್ದು, ಕುಚಬಂಧವಿದೆ. ಈ ಎರಡು ಮೂರ್ತಿಯ ಕೈಗಳು ಮಾತ್ರ ಗೋಚರಿಸುತ್ತದೆ. ಬಲಗೈ ಸಂಪೂರ್ಣ

ತ್ರುಟಿತವಾಗಿದ್ದು, ಎಡಗೈ ಮುಂಭಾಗವು ಸಹಾ ತ್ರುಟಿತವಾಗಿದೆ. ಪಾದಗಳವರೆಗೆ ಇಳಿಬಿದ್ದ ಸೀರೆ ಕಾಲಿನ ಕಡಗ ಹಾಗೂ ಪಾದ ಸರಗಳಿದ್ದು, ಬಲಗಾಲು ತ್ರುಟಿತವಾಗಿದೆ. ಇಷ್ಟೆಲ್ಲ ತ್ರುಟಿತವಾಗಿರುವ ಈ ಮೂರ್ತಿಯ ಲಕ್ಷಣಗಳು ಹರಪನಹಳ್ಳಿ ಪರಿಸರದಲ್ಲಿ ಕಂಡುಬರುವ ಬಾಗಳಿಯಲ್ಲಿ ದೊರೆತ ಸರಸ್ವತಿ ಮೂರ್ತಿಯ ಲಕ್ಷಣಗಳಿಗೆ ತುಲನಾತ್ಮಕವಾಗಿ ಹೋಲಿಕೆ ಮಾಡಿದಾಗ ಒಂದೇ ರೀತಿಯಲ್ಲಿರುವುದು ಕಂಡುಬರುತ್ತದೆ. ಆದುದರಿಂದ ಸರಸ್ವತಿಯೆಂದು ನಿಖರವಾಗಿ ಹೇಳುವುದರಲ್ಲಿ ಯಾವುದೇ ಸಂಶಯವಿಲ್ಲ. ಈ ಮೂರ್ತಿಯು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಹೇಳಲಾಗಿದೆ.

## ಇತರೆ ಶಿಲ್ಪಗಳು

### ನಾಗರಶಿಲ್ಪ

ನೀಲಗುಂದದ ಪರಿಸರದಲ್ಲಿ ಬರುವ ಪ್ರತಿಯೊಂದು ಗ್ರಾಮದಲ್ಲಿ ನಾಗರಶಿಲ್ಪ ಶಿಲೆಗಳನ್ನು ಅತಿ ಹೆಚ್ಚಿನ ರೀತಿಯಲ್ಲಿ ಕಾಣಬಹುದು. ಇದರಲ್ಲಿ ಚಿರಸ್ತಹಳ್ಳಿ ಕಲ್ಲೇಶ್ವರ ದೇವಾಲಯದ ಬಲಭಾಗದಲ್ಲಿ ವಿಶಿಷ್ಟ ರೀತಿಯ ನಾಗರ ಶಿಲ್ಪಗಳು ಇದೆ. ಅಂದರೆ ಸುಮಾರು ಹದಿಮೂರು ನಾಗರ ಶಿಲ್ಪಗಳಿವೆ.

ನೀಲಗುಂದದಲ್ಲಿ ಬರುವ ಭೀಮೇಶ್ವರ ದೇವಾಲಯ ಆವರಣದಲ್ಲಿ ಶಾಸನ ಪಂಕ್ತಿಯಲ್ಲಿ ಒಂದು ದೊಡ್ಡದಾದ ನಾಗರಶಿಲ್ಪವನ್ನು ಕೆತ್ತಲಾಗಿದೆ. ಇದು ನೋಡಲು ಬಹಳ ಸುಂದರವಾದ ರೀತಿಯಲ್ಲಿದೆ. ಅಲ್ಲದೆ ಬಸವಣ್ಣ ದೇವಸ್ಥಾನದಲ್ಲಿ ಗ್ರಾಮದ ಪ್ರಮುಖ ಸ್ಥಾನಗಳಲ್ಲಿ ಹೆಚ್ಚಿನ ನಾಗಶಿಲ್ಪವನ್ನು ಕಾಣಬಹುದು.

ಕುಂಚೂರಿನಲ್ಲಿ ಬರುವ ಕಲ್ಲೇಶ್ವರ ದೇವಾಲಯ ಅವರಣದಲ್ಲಿ ಸುಮಾರು ೪ಕ್ಕೂ ಹೆಚ್ಚು ನಾಗರಶಿಲ್ಪಗಳಿವೆ. ಅಲ್ಲದೆ ದೇವಾಲಯ ದ್ವಾರಬಾಗಿಲಲ್ಲಿ ಪ್ರತಿಷ್ಠಾಪನ ಮಾಡಿದ ನಾಗರಶಿಲ್ಪವಿದೆ. ಆದರೆ ಸಂರಕ್ಷಣೆಯಿಲ್ಲದೆ ಬಿನ್ನವಾಗಿದೆ. ಅದೇ ಗ್ರಾಮದ ಊರಿನ ಮುಂಭಾಗದ ಬಸವಣ್ಣನ ದೇವಸ್ಥಾನದಲ್ಲಿ ಸಾಲಾಗಿ ನಿಲ್ಲಿಸಿದ ನಾಗರಶಿಲ್ಪವನ್ನು ಕಾಣಬಹುದು.

ಈ ಪರಿಸರದಲ್ಲಿ ಬರುವ ಹಾರಸಹಾಳ್, ಇಟ್ಟಗುಡಿ ಹಾಗೂ ಹಲುವಾಗಲು ಗ್ರಾಮದ ದೇವಸ್ಥಾನದ ಪಕ್ಕದಲ್ಲಿ ಅಂದರೆ ಆಂಜನೇಯ ದೇವಾಲಯ ಮುಂಭಾಗದ ಎಡಭಾಗದಲ್ಲಿ ೧೦ಕ್ಕೂ ಹೆಚ್ಚು ನಾಗರಶಿಲ್ಪಗಳಿವೆ. ಅಲ್ಲಿ ಆಂಜನೇಯ ದೇವಾಲಯ ಗರ್ಭಗುಡಿಯ ಹಿಂಭಾಗದಲ್ಲಿ ಗೋಡೆಗೆ ಒಂದು ದೊಡ್ಡದಾದ ನಾಗರಶಿಲ್ಪವನ್ನು ನಿರ್ಮಾಣ ಮಾಡಿರುವುದು ಕಂಡುಬರುತ್ತದೆ. ಊರಿನ ಇತರ ದೇವಾಲಯ ಪಕ್ಕದಲ್ಲಿ ನಾಗರಶಿಲ್ಪವನ್ನು ಕಾಣಬಹುದಾಗಿದೆ.

ಒಟ್ಟಾರೆ ಹೇಳುವುದಾದರೆ ಈ ಪರಿಸರದಲ್ಲಿ ನಾಗರಶಿಲ್ಪ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತದೆ. ಕಲ್ಯಾಣಿ ಚಾಲುಕ್ಯರು ನಾಗರಶಿಲ್ಪಗಳ ರಚನೆ ಹೆಚ್ಚು ಪ್ರೋತ್ಸಾಹ ನೀಡಿರಬಹುದು ಹಾಗಾಗಿ ಪ್ರಾರಂಭದಿಂದ ಈಗಿನವರೆಗೂ ಅದೇ ಸಂಪ್ರದಾಯ ಬೆಳೆದುಬಂದಿದೆ.

## ೪.೩. ಮಠ

ಮಠವೆಂದರೆ ಛಾತ್ರಾದಿ ನಿಲಯ ಎಂದು ಅಮರಕೋಶ ಹೇಳುತ್ತದೆ. ಛಾತ್ರ ಎಂದರೆ ಶಿಷ್ಯ ಅಥವಾ ವಿದ್ಯಾರ್ಥಿ ಎಂದರ್ಥ. ಆದುದರಿಂದ ಅಮರಕೋಶಕಾರನ ಪ್ರಕಾರ ಛಾತ್ರಾದಿಗಳು ವಾಸಿಸುವ ನಿಲಯಗಳೇ ಮಠಗಳು. ಸಂಸ್ಕೃತ ಶಬ್ದಕೋಶದಲ್ಲಿ ಮಠಗಳೆಂದರೆ ಸನ್ಯಾಸಿಗಳಾದವರು ಶಿಷ್ಯರಿಗೆ ಜ್ಞಾನ ಬೋಧನೆ ಮಾಡುತ್ತಾ ವಾಸಿಸುವ ಸ್ಥಳಗಳೆಂದು ಹೇಳಿದೆ. ಮ್ಯಾಕ್ಡೋನಲ್ ಅವರ ಸಂಸ್ಕೃತ ಶಬ್ದಕೋಶದಲ್ಲಿಯೂ ಇದೇ ರೀತಿ ಹೇಳಲಾಗಿದೆ. ವಿದ್ಯಾರ್ಥಿಗಳು ಜ್ಞಾನ ಬೋಧನೆ ಪಡೆಯುವ ಕೇಂದ್ರಗಳೇ ಮಠಗಳೆಂದು ಶಬ್ದ ಕಲ್ಪದ್ರುಮ ತಿಳಿಸುತ್ತದೆ.[೩೮]

ಕನ್ನಡ ಸಾಹಿತ್ಯ ಪರಿಷತ್ತಿ ಸಂಕ್ಷಿಪ್ತ ನಿಘಂಟಿನಲ್ಲಿ ಮಠ ಎಂಬುವುದಕ್ಕೆ ಈ ರೀತಿಯಲ್ಲಿ ಅರ್ಥಗಳನ್ನು ನೀಡಲಾಗಿದೆ.

೧. ಸಂನ್ಯಾಸಿಗಳು ವಾಸಿಸುವ ಕುಟೀರ, ಆಶ್ರಮ

೨. ವಿದ್ಯೆ, ಜ್ಞಾನ ಧರ್ಮಬೋಧನೆ ಮತ್ತು ಪ್ರಸಾರ ಕಾರ್ಯ ನಡೆಸುವ ಆಧ್ಯಾತ್ಮಿಕ ಸಂಸ್ಥೆ

೩. ಭೋಜನ ಶಾಲೆ, ಅನ್ನಛತ್ರ

೪. ಪಾಠಶಾಲೆ, ಶಿಕ್ಷಣ ಶಾಲೆ[೩೯]

ಭಾರತದಲ್ಲಿ ಮೊಟ್ಟ ಮೊದಲು ವೀರಶೈವ ಧರ್ಮದಲ್ಲಿ ಮಠಗಳು ಕಂಡುಬರುತ್ತವೆ. ಭಾರತದಾದ್ಯಂತ ವೀರಶೈವಾಚಾರ್ಯರು ಅನೇಕ ಮಠಮಾನ್ಯಗಳನ್ನು ಸ್ಥಾಪಿಸಿ ತತ್ವಶಾಸ್ತ್ರ ಮತ್ತು ಲೌಕಿಕ ವಿದ್ಯೆ ಪ್ರಸಾರ ಕ್ಷೇತ್ರಗಳಾಗಿ ಮಾಡಿಕೊಂಡರೆಂದು ತಿಳಿದುಬರುತ್ತದೆ. ವೀರಶೈವ ಮಠಗಳು ೭ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದ ಬಗ್ಗೆ ಶಾಸನಗಳು ಆಧಾರ ಒದಗಿಸುತ್ತವೆ. ಒಂದು ಕಾಲಕ್ಕೆ ಕರ್ನಾಟಕದಲ್ಲಿ ಬಹಳ ಪ್ರಮುಖವಾಗಿದ್ದ ಕಾಳಾಮುಖ ಮಠಗಳೂ, ಬಸವಣ್ಣನ ಕಾಲದಲ್ಲಾದ ಧಾರ್ಮಿಕ ಕ್ರಾಂತಿಯಿಂದಾಗಿ, ಕೆಲವು ಇಲ್ಲವಾದರೆ, ಇನ್ನು ಕೆಲವು ವೀರಶೈವ (ಲಿಂಗಾಯಿತ) ಮಠಗಳಾಗಿ ಪರಿವರ್ತನೆ ಗೊಂಡಂತೆ ತೋರುತ್ತದೆ.[೪೦]

ಈ ವೀರಶೈವ ಮಠಗಳಲ್ಲಿ ಗುರುಪೀಠ ಮತ್ತು ವಿರಕ್ತಪೀಠಗಳೆಂದು ಎರಡು ಪ್ರಕಾರಗಳಿದ್ದು, ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿದ ನೀಲಗುಂದದ ಗುಡ್ಡದ ವಿರಕ್ತ ಮಠವು ವಿರಕ್ತ ಸಂಪ್ರದಾಯಕ್ಕೆ ಸೇರಿದ ಮಠವಾಗಿದೆ. ಗುಡ್ಡ ವಿರಕ್ತ ಮಠ, ನೀಲಗುಂದ ಗ್ರಾಮದ ಉತ್ತರ ದಿಕ್ಕಿನಲ್ಲಿ ಇದ್ದು, ಈ ಮಠ ಉತ್ತರ ಅಭಿಮುಖವಾಗಿದೆ. ಇದು ತಿಮ್ಮಪ್ಪನ ಗುಡ್ಡ ತಪ್ಪಲಿನ ಕೆರೆಯ ದಡದಲ್ಲಿ ಸ್ಥಾಪನೆಯಾಗಿದೆ. ಇದರ ಪಕ್ಕದಲ್ಲಿ ಕಲ್ಲಿನ ಗುಡ್ಡ ಇರುವ ಕಾರಣದಿಂದ ಈ ಮಠಕ್ಕೆ ಶ್ರೀಗುಡ್ಡ ವಿರಕ್ತ ಮಠವೆಂದು ಹೆಸರು ಬಂದಿದೆ.[೪೧]

೧೫ನೇ ಶತಮಾನದಲ್ಲಿ ವಿಜಯನಗರವನ್ನು ಆಳ್ವಿಕೆ ಮಾಡುತ್ತಿದ್ದ ಪ್ರೌಢ ದೇವರಾಯನು ಅನೇಕ ವೀರಶೈವ ಕವಿಗಳಿಗೆ ಸಾಹಿತಿಗಳಿಗೆ, ಧರ್ಮ ಪ್ರಚಾರಕರಿಗೆ ರಾಜಾಶ್ರಯವನ್ನು ನೀಡಿದ್ದನು. ಆ ಕಾಲಘಟ್ಟದಲ್ಲಿ ವೀರಶೈವ ಧರ್ಮ ಉನ್ನತಮಟ್ಟಕ್ಕೇರಿತು. ಅಂತಹದರಲ್ಲಿ ನೂರೊಂದು ವಿರಕ್ತರು ರಾಜಾಶ್ರಯದಿಂದ ಅಲ್ಲಲ್ಲಿ ಧರ್ಮ ಪ್ರಚಾರ ಮಾಡಿದರು. ಅವರಲ್ಲಿ ಕೆಲವು ವಿರಕ್ತರು ಹರಪನಹಳ್ಳಿ, ಕೂಡ್ಲಿಗಿ ಭಾಗಕ್ಕೆ ಬಂದರು. ಇವರಲ್ಲಿ ಗುರು ಬಸವೇಶ, ಕೆಂಪಯ್ಯ, ಕೋಲಶಾಂತಯ್ಯ, ಮದ್ದಾನೇಶ, ತಿಪ್ಪೇರುದ್ರ, ಹಾಲವರ್ತಿ, ಚನ್ನ ವೀರೇಶ, ಗುಡ್ಡ ಚನ್ನಬಸವೇಶ್ವರ, ಇವರು ಅಲ್ಲಲ್ಲಿ ಲೀಲೆ ಮಾಡುತ್ತಾ ನೆಲೆಸಿ ಲಿಂಗೈಕ್ಯರಾದರು.

ಅವರಲ್ಲಿ ಮುಖ್ಯರೆಂದರೆ ಹರಪನಹಳ್ಳಿ ಗೋಸಾವಿ ಗುಡ್ಡದ ಹಾಲವರ್ತಿ ಚನ್ನವೀರ ಶಿವಯೋಗಿಗಳು ಸಂಚರಿಸುತ್ತ ತುಂಗೆತಡಿ ಲಿಂಗನಾಯ್ಕನ ಹಳ್ಳಿಯಲ್ಲಿ ನೆಲೆಸಿದರು. ಇತ್ತ ಹರಪನಹಳ್ಳಿ ದಕ್ಷಿಣಕ್ಕೆ ಬೃಹದಾಕಾರದ ಕಲ್ಲಿನ(ಕ್ವಾರಿ) ಗುಡ್ಡ ಆ ಗುಡ್ಡದ ಗವಿಯಲ್ಲಿ ಚನ್ನಬಸವರು ಅನುಷ್ಠಾನ ಮಾಡುತ್ತಿರುವಾಗ, ಸೋಮಶೇಖರ ರಾಜ ಇವರ ಪ್ರಭಾವಕ್ಕೆ ಒಳಗಾಗಿ ಇವನು ಶ್ರೀ ಚನ್ನಬಸವ ಶಿವಯೋಗಿಗಳಿಂದ ಧಾರ್ಮಿಕ ಸಂಸ್ಕಾರ ಹೊಂದಿ ಗುರುಗಳಿಗೆ (ಭವ್ಯ) ಹರಿಹರ ಮಾರ್ಗವಾಗಿ ಹೋಗುವ ಹರಪನಹಳ್ಳಿಗೆ ೨ ಕಿ.ಮೀ. ದೂರದಲ್ಲಿ ಭವ್ಯ ಗುಡ್ಡದ ಕೆಳಗೆ ಕಲ್ಲಿನ ಮಠವನ್ನು ಕಟ್ಟಿಸಿರುವುದು ಇಂದಿಗೂ ಸಾಕ್ಷಿಯಾಗಿದೆಯೆಂದು ಸ್ಥಳೀಯರ ಅಭಿಪ್ರಾಯವಾಗಿದೆ.

### ಗುರು ಪರಂಪರೆ

೧. ಶ್ರೀ ಚನ್ನಬಸವ ಶಿವಯೋಗಿಗಳು (ಮೂಲ ಕರ್ತೃ)

೨. ಶ್ರೀ ಸಿದ್ಧರಾಮ (ಶಿವಯೋಗಿಗಳು) ಸ್ವಾಮಿಗಳು

೩. ಶ್ರೀ ಎರಡನೇ ಚನ್ನಬಸವ ಸ್ವಾಮಿಗಳು

೪. ಶ್ರೀ ನೀಲಕಂಠ ಸ್ವಾಮಿಗಳು

೫. ಶ್ರೀ ಹೊಳೆ ಇಟಗಿ ನಾಗಭೂಷಣ ದೇವರು

೬. ಶ್ರೀ ಬೆವಳೆಪ್ಪ ದೇವರು

೭. ನಿಡಗುಂದಿ ಮಲ್ಲಿಕಾರ್ಜುನ ಸ್ವಾಮಿಗಳು

೮. ಅಭಿನವ ಚನ್ನಬಸವ ಶಿವಯೋಗಿಗಳು

ಈ ಪೀಠದ ಅಧಿಪತಿಗಳ ಬಗ್ಗೆ ಈ ಕೆಳಕಂಡಂತೆ ಮಾಹಿತಿಯನ್ನು ಸಂಗ್ರಹಿಸಿ ವಿವರಿಸಲಾಗಿದೆ.

### ಶ್ರೀ ಚನ್ನಬಸವ ಶಿವಯೋಗಿಗಳು

ಶ್ರೀ ಚನ್ನಬಸವ ಶಿವಯೋಗಿಗಳು ನಂತರ ನೀಲಗುಂದದ ಗುಡ್ಡದ ಸಂಸ್ಥಾನ ಜಂಗಮ ಪೀಠದ ಮೂಲ ಕರ್ತೃಗಳೆಂದು ಹೇಳಬಹುದಾಗಿದೆ. ಈ ಶಿವಯೋಗಿಗಳು ಕೆಲವು ಕಾಲ ಅಲ್ಲೇ(ನೆಲಸಿ) ಅನುಷ್ಠಾನ ಮಾಡುತ್ತ ಬಂದ ಭಕ್ತರ ಕಷ್ಟಗಳನ್ನು ನಿವಾರಣೆ ಮಾಡುತ್ತ, ಉಗ್ರತಪಸ್ವಿಗಳಾಗಿ, ಒಂದು ಕಡೆ ನಿಲ್ಲದೆ

ಜ್ಞಾನ ಭೋದನೆ ಮಾಡುತ್ತಾ ಲೋಕ ಸಂಚಾರಕ್ಕೆ ಹೋಗುವ ಮೊದಲು ತಮ್ಮ ಮಠಕ್ಕೆ ಉತ್ತರಾಧಿಕಾರಿಯಾದ ಸಿದ್ಧರಾಮಗಳಿಗೆ ಪಟ್ಟಕಟ್ಟಿ ಮೊದಲಾದ ಹುಲಗಿ-ಹೊಸೂರು, ಕೊಂಗನ ಹೊಸೂರು, ಗುಂಡಗತ್ತಿ, ಗಂಗನರಸಿ ಸ್ಥಳಗಳಲ್ಲಿ ಪಾದವಿಟ್ಟು ನಂತರ ನೀಲಗುಂದದ ಪ್ರಶಾಂತ ಪರಿಸರದಲ್ಲಿ ಲಿಂಗೈಕ್ಯರಾದರು.

**ಶ್ರೀ ಸಿದ್ಧರಾಮ ಸ್ವಾಮಿಗಳು**

ಮೂಲ ಕರ್ತೃ ಚನ್ನಬಸವ ಶಿವಯೋಗಿಗಳ ತರುವಾಯ ಶ್ರೀ ಸಿದ್ಧರಾಮ ಗುಡ್ಡದ ವಿರಕ್ತ ಮಠದ ಅಧ್ಯಕ್ಷರಾದರು. ಇವರು ನೀಲಗುಂದದಲ್ಲಿ ನೆಲೆಸಿ, ಭಕ್ತರ ಸುಖ ದುಃಖಗಳಿಗೆ ಸ್ಪಂದಿಸುವವರಾಗಿದ್ದರು, ಭಕ್ತರೂ ಅವರ ಮೇಲೆ ಅಪಾರ ಭಕ್ತಿಯನ್ನಿಟ್ಟುಕೊಂಡಿದ್ದರು. ಹಾಗಾಗಿ ಸ್ವಾಮಿಜೀಯವರು ಭಕ್ತರಿಗೆ ಅನ್ನದಾಸೋಹದ ವ್ಯವಸ್ಥೆ, ಪುರಾಣ ಪ್ರವಚನ, ಶಿವನ ಕೀರ್ತನೆಗಳನ್ನು ಹಮ್ಮಿಕೊಂಡು ಭಕ್ತರಿಗೆ ಧರ್ಮ ಮತ್ತು ಸಂಸ್ಕೃತಿಯ ಸಂಸ್ಕಾರ ನೀಡುತ್ತಾ, ಇತರ ಬೋಧನೆಗಳನ್ನು ಹೇಳುತ್ತ ಹರಪನಹಳ್ಳಿ ಕಟ್ಟಿಮಠದಲ್ಲಿ ಲಿಂಗೈಕ್ಯರಾದರು.

**ಚನ್ನಬಸವಸ್ವಾಮಿ**

ಶ್ರೀ ಸಿದ್ಧರಾಮ ಸ್ವಾಮಿಗಳ ತರುವಾಯ ಗುಡ್ಡದ ವಿರಕ್ತ ಮಠಕ್ಕೆ ಶ್ರೀ ಎರಡನೆ ಚನ್ನಬಸವಸ್ವಾಮಿಗಳು ಅಧ್ಯಕ್ಷರಾಗಿ ಬಂದರು. ಇವರ ಕೆಲವು ಶಾಖಾ ಮಠಗಳಾದ, ಹರಪನಹಳ್ಳಿ, ಗುಂಡಗತ್ತಿ, ಅರಸೀಕೆರೆ ಈ ಮಠಗಳನ್ನು ಸಹಾ ನೋಡಿಕೊಳ್ಳುತ್ತಿದ್ದರು. ಇವರು ಹೆಚ್ಚಾಗಿ ಅರಸೀಕೆರೆಯ ಕೊಲಶಾಂತೇಶ್ವರ ಮಠದಲ್ಲಿ ನೆಲೆಸುತ್ತಿದ್ದರು. ಇವರನ್ನು ಪವಾಡ ಪುರುಷರೆಂದು ಊಹಿಸಲಾಗಿದೆ. ಏಕೆಂದರೆ ಅರಸಿಕೆರೆ ಸಾಳುಂಕೆ ಮಠ ಶ್ರೀಮಂತನಿಗೆ ಅರವತ್ತು ವರ್ಷಗಳಾದರೂ ಮಕ್ಕಳಾಗಿರಲಿಲ್ಲ. ಗುರುಗಳು ಅರಸೀಕೆರೆಯ ಕೋಲಶಾಂತ ಮಠದಲ್ಲಿದ್ದಾಗ ಈ ದಂಪತಿಗಳು ಚನ್ನಬಸವ ಸ್ವಾಮಿಗಳಲ್ಲಿ ಬೇಡಿಕೊಂಡಾಗ ಉತ್ತತ್ತಿ ಕಲ್ಲುಸಕ್ರಿ ನೀಡಿ ಆರ್ಶೀವದಿಸಿದ ಮೇಲೆ ಅವರಿಗೆ ಗಂಡು ಮಗು ಜನಿಸುತ್ತದೆ. ಅದಕ್ಕೆ ಚನ್ನಬಸವನೆಂದು ಹೆಸರಿಡುತ್ತಾರೆ. ಈ ಮನೆತನದ ಪರಂಪರೆಯಲ್ಲಿ ಇಂದಿಗೂ ಇದೇ ನಾಮಕರಣ ಮಾಡುತ್ತ ಬಂದಿರುವುದು ಕಂಡುಬರುತ್ತದೆ. ಆ ಪರಂಪರೆಯಲ್ಲಿ ಧಾರ್ಮಿಕ ಕಾರ್ಯಗಳನ್ನು ನಡೆಸುತ್ತ ಮಠವನ್ನು ಬೆಳೆಸಿದರು. ಈ ಸ್ವಾಮಿಗಳ ಗದ್ದುಗೆ ಅರಸೀಕೆರೆ ಹೊರಗಿನ ಮಠದಲ್ಲಿ ಇದೆ.

**ನೀಲಕಂಠಸ್ವಾಮಿ**

ಎರಡನೇ ಚನ್ನಬಸವ ಸ್ವಾಮಿಗಳ ನಂತರ ಶ್ರೀ ಗುಡ್ಡದ ವಿರಕ್ತ ಮಠದ ಅಧ್ಯಕ್ಷತೆಯನ್ನು ಶ್ರೀ ನೀಲಕಂಠ ಸ್ವಾಮಿಗಳು ವಹಿಸಿಕೊಂಡರು. ಇವರಿಗೆ ಉದ್ದವಾದ ಗಡ್ಡವಿದ್ದುದರಿಂದ ಜನಸಾಮಾನ್ಯರು ಇವರಿಗೆ ಗಡ್ಡದ ಅಜ್ಜನವರು, ಆಡು ಮಾತಿನಲ್ಲಿ ಗಡ್ಡದ ಅಜ್ಜರು ಎಂದು ಕರೆಯುತ್ತಿದ್ದರು. ಸಮಾಜದ ಬಗ್ಗೆ ಅವರಿಗೆ ತುಂಬ ಕಳಕಳಿ ಇತ್ತು. ಇವರು ನೀಲಗುಂದ ಮಠಕ್ಕೆ ಸಂಬಂಧಿಸಿದ ಶಾಖಾ ಮಠಗಳನ್ನು ಅಭಿವೃದ್ಧಿ ಪಥದತ್ತ ಸಾಗಿಸಿದರು. (ಈ ಗ್ರಾಮ) ತಮ್ಮ ಮಠದ ಮುಂಭಾಗದಲ್ಲಿ ದನಕರುಗಳ ಸಲುವಾಗಿ

ನೀರಿನಕಟ್ಟೆ ಕಟ್ಟಿಸಿದರು. ಇಂದಿಗೂ ಈ ಕೆರೆಗೆ ಸ್ಥಳೀಯರು ಸ್ವಾಮಿಯವರ ಕಟ್ಟೆ ಎನ್ನುತ್ತಾರೆ. ಈ ಶ್ರೀಗಳು ಸಹಾ ಧಾರ್ಮಿಕ ಕಾರ್ಯಗಳನ್ನು ನಡೆಸುತ್ತ ತಮ್ಮ ಶಾಖಾ ಮಠವಾದ ಕಟಗಿಹಳ್ಳಿಯಲ್ಲಿ ಲಿಂಗೈಕ್ಯರಾದರು.

### ಶ್ರೀ ಹೊಳೆ ಇಟ್ಟಗಿ ನಾಗಭೂಷಣಸ್ವಾಮಿಗಳು

ಶ್ರೀ ನೀಲಕಂಠಸ್ವಾಮಿಗಳ ತರುವಾಯ ನೀಲಗುಂದ ಮತ್ತು ಹರಪನಹಳ್ಳಿ ಭಕ್ತರ ಪ್ರಯತ್ನದ ಫಲವಾಗಿ ಗುಡ್ಡದ ಮಠಕ್ಕೆ ಶ್ರೀ ಹೊಳೆ ಇಟ್ಟಗಿ ನಾಗಭೂಷಣ ದೇವರು ದೊರಕಿದರು. ಇವರು ಅಧಿಕಾರ ಸ್ವೀಕರಿಸಿ ಕೆಲವೇ ತಿಂಗಳಲ್ಲಿ ಸಂಗೀತ, ವೈದಿಕ, ಜೋತಿಷ್ಯ ಪಾಠಶಾಲೆಗಳನ್ನು ಹರಪನಹಳ್ಳಿಯಲ್ಲಿ ಸ್ಥಾಪಿಸಿದರು. ಮಠದಲ್ಲಿ ಧಾರ್ಮಿಕ ಚಟುವಟಿಕೆಗಳನ್ನು ಚುರುಕುಗೊಳ್ಳುವಂತೆ ಪ್ರಚಾರಪಡಿಸಿದರು. ಇವರು ಹರಪನಹಳ್ಳಿ ಮತ್ತು ಗುಂಡಗತ್ತಿ ಈ ಶಾಖಾ ಮಠಗಳನ್ನು ಬೆಳೆಸಿದರು. ಇವರ ಕಾಲಕ್ಕೆ ನೀಲಗುಂದ ಮಠಕ್ಕೆ ಸ್ವಲ್ಪ ಆದಾಯ ಬರುವಷ್ಟು ಆಸ್ತಿ ಮಾಡಿದರು. ನಂತರ ಇವರು ಹೊಳೆ ಇಟಗಿ ಮಠಕ್ಕೆ ಪಟ್ಟವಾಗಿ ಹೋದ ತರುವಾಯ ನೀಲಗುಂದ ಮಠ ಖಾಲಿಬಿತ್ತು.

### ಶ್ರೀ ಜವಳೆಪ್ಪ ದೇವರು

ಮಠದ ಅಧಿಕಾರವು ಶ್ರೀ ಜವಳೆಪ್ಪ ದೇವರಿಗೆ ಸಮಾಜದ ಒಪ್ಪಿಗೆ ಇಲ್ಲದೆ ಮತ್ತು ಯಾವ ಕಷ್ಟಕಾರ್ಪಣ್ಯಗಳಿಲ್ಲದೆ ದೊರೆಯಿತು. ಅವರು ಕೆಲವು ವರ್ಷಗಳವರೆಗೆ ನೀಲಗುಂದ ಮಠದಲ್ಲಿದ್ದು, ಧಾರ್ಮಿಕ ಆಚರಣೆಗಳು ನಡೆಯುವಂತೆ ನೋಡಿಕೊಂಡರು. ಇವರು ಧಾರವಾಡ ಮರುಘಾಮಠದಲ್ಲಿ ಅಕಾಲಿಕ ಮರಣ ಹೊಂದಿದರು.

### ನಿಡಗುಂದಿ ಮಲ್ಲಿಕಾರ್ಜುನಸ್ವಾಮಿಗಳು

ಜವಳಪ್ಪ ದೇವರು ಹೋದ ನಂತರ ಧಾರವಾಡ ಮುರುಘಾಮಠದಲ್ಲಿಯೇ ಇರುವ ನಿಡಗುಂದಿ ಮಲ್ಲಿಕಾರ್ಜುನ ಸ್ವಾಮಿಗಳು ನೀಲಗುಂದಿ ಮಠಕ್ಕೆ ಬಂದರು. ಇವರು ಕೆಲವು ವರ್ಷಗಳವರೆಗೆ ಮಠಕ್ಕಾಗಿ ಶ್ರಮಿಸಿದರು. ಆದರೆ ಮಠವು ಅವನತಿ ಹೊಂದುತ್ತಾ ಇರುವುದನ್ನು ಗಮನಿಸಿದ ಇವರು ಅನೇಕ ವಿವಾದಗಳಿಗೆ ಒಳಗಾದ ಮಠವನ್ನು ತ್ಯಜಿಸಿದರು.

### ಮಠದ ಉತ್ತರಾಧಿಕಾರಿಗಳ ಆಯ್ಕೆ

ನೀಲಗುಂದ ಪರಿಸರದ ಗ್ರಾಮಸ್ಥರು ಮತ್ತೆ ಈ ಮಠಕ್ಕೆ ಉತ್ತರಾಧಿಕಾರಿಗಳನ್ನು ನೇಮಿಸಲು ಮುಂದಾದರು. ಧಾರವಾಡ ಇಲ್ಲೆಯ ಕುಂದಗೋಳ ತಾ. ಬೆಟ್ಟದೂರ ಎಂಬ ಚಿಕ್ಕಹಳ್ಳಿಯಲ್ಲಿ ಜನಿಸಿದವರಾದ ಶ್ರೀಗಳು ಉನ್ನತ ಶಿಕ್ಷಣ ಕಲಿಯಲು ಹುಬ್ಬಳ್ಳಿ, ಮೂರುಸಾವಿರ ಮಠದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದರು. ಚರಲಿಮಗ ದೇವರಾಗಿ ಇದ್ದು, ಬಿ.ಎ.ಮುಗಿಸಿದಾಗ ಅಕ್ಕೆ ಆಲೂರು ವಿರಕ್ತ ಮಠದ

ಶ್ರೀ ಚನ್ನವೀರ ಸ್ವಾಮಿಗಳು ಲಿಂಗನಾಯಕನ ಹಳ್ಳಿ ಶ್ರೀಗಳ ಸಮ್ಮುಖದಲ್ಲಿ ಮರಿದೇವರನ್ನು ಕ್ರಿ.ಶ. ೧೯೮೬ (೧೯೮೬) ಜೂನ್ ೧೧ ರಂದು ಆಯ್ಕೆ ಮಾಡಿದರು. ಇವರಿಗೆ ಅಭಿನವ ಚನ್ನಬಸವ ಶಿವಯೋಗಿಗಳೆಂದು ನಾಮಕರಣ ಮಾಡಿ ಪಟ್ಟಾಧಿಕಾರಿಗಳಾಗಿ ನೇಮಿಸಿದರು.

ಪೂಜ್ಯರು ನೀಲಗುಂದ ಮಠಕ್ಕೆ ಪಟ್ಟಕಟ್ಟಿದ ಮೇಲೆ ತಮ್ಮ ಅವ್ಯಾಹತ ತಪಸ್ಸಿನ ಫಲವಾಗಿ ಹಾಳು ಬಿದ್ದ ಮಠವನ್ನು ಸಂಪೂರ್ಣ ಹೊಸ ಮಠವಾಗಿ ಕಟ್ಟಿಸಿದ್ದಾರೆ. ಶಿವಾನುಭವ ಮಂಟಪ, ಮಹಾದ್ವಾರ, ದಾಸೋಹ ಮನೆ, ಗುರುಮಠ ಅಲ್ಲದೆ, (ನೀಲಗುಂದ ಕ್ರಾಸ್) ಕೊಟ್ಟೋರೇಶ್ವರ ಮಠ ಹರಪನಹಳ್ಳಿ, ಶಾಖಾ ಕಟಗಿಹಳ್ಳಿ, ಮಠ, ಗುಂಡಗತ್ತಿ, ಶಾಖಾ ಚನ್ನಬಸವಸ್ವಾಮಿ ಮಠ ಕಟ್ಟಿಸಿ ಧರ್ಮಕ್ಷೇತ್ರಗಳನ್ನಾಗಿ ಮಾಡಿದ ಮಹಿಮರು ಹಳ್ಳಿ ಹಳ್ಳಿಗೆ ಪಟ್ಟಣಕ್ಕೆ ಹೀಗೆ ಹಗಲಿರುಳು ಜನ ಜಾಗೃತಿಗಾಗಿ ಭಕ್ತರಿಗೆ ಜ್ಞಾನ ದಾಸೋಹವನ್ನು ಉಣಬಡಿಸುತ್ತ ಪೂಜ್ಯ ಶ್ರೀ ಚನ್ನಬಸವ ಶಿವಯೋಗಿಗಳು "ಜನಪರ ಜಂಗಮ ನಡೆದಾಡುವ ಜೀವಂತ ದೇವರು" ಎಂದು ಜನಮನದಲ್ಲಿ ನೆಲೆಸಿದ್ದಾರೆ.

ಶ್ರೀಗಳ ೨೧ ವರ್ಷದ ಅಖಂಡ ನಿಸ್ಪೃಹ ಸೇವೆ ಫಲವಾಗಿ ಎಲ್ಲ ಮಠಗಳು ಇಂದು ಧರ್ಮಕ್ಷೇತ್ರಗಳಾಗಿ ನಿಂತಿವೆ. ಅನಾಥ ಮಕ್ಕಳ ರಕ್ಷಣೆ ನಿತ್ಯ ಬಡ ವಿದ್ಯಾರ್ಥಿಗಳಿಗಾಗಿ ಅನ್ನ-ವಸತಿ ದಾಸೋಹ ಇಂದಿಗೂ ನಡೆಯುತ್ತಿವೆ. ಪ್ರತಿವರ್ಷ ಮಹಾತ್ಮರ ಸ್ಮರಣೆಯ ಸಂದರ್ಭದಲ್ಲಿ ಬಡವರಿಗಾಗಿ ಸಾಮೂಹಿಕ ಲಗ್ನಗಳು ಮತ್ತು ಪ್ರಾಥಮಿಕ ಶಿಕ್ಷಣಕೇಂದ್ರ ಶಿಶುವಿಹಾರ ನಡೆಸುತ್ತಿದ್ದಾರೆ. ಹೀಗೆ ಇವರನ್ನು ನಿತ್ಯ ಸಮಾಜದ ಹಿತಚಿಂತಕರೆಂದು ಹೇಳಬಹುದು.

ಈ ಮೇಲಿನ ಎಲ್ಲ ಅಂಶಗಳು ಸ್ಥಳೀಯರಿಂದ ಮತ್ತು ಗುರುಗಳಿಂದ ಪಡೆದ ಮಾಹಿತಿಗಳಾಗಿವೆ. ಇವನ್ನು ಹೊರತುಪಡಿಸಿದರೆ ಬೇರೆ ಮಾಹಿತಿಗಳು ಲಭ್ಯವಿಲ್ಲ.

**ಅಡಿಟಿಪ್ಪಣಿಗಳು**

೧. ಮುನಿರಾಜು ಕೆ.ಎಂ., ೨೦೦೨, ಹುಲುಕಡಿನಾಡು : ಒಂದು ಸಾಂಸ್ಕೃತಿಕ ಅಧ್ಯಯನ, ಪು.೧೯

೨. ಅದೇ, ಪು.೧೯

೩. ಅದೇ, ಪು.೧೯

೪. ತಿಪ್ಪೇಸ್ವಾಮಿ, ೨೦೦೦, ದಾವಣಗೆರೆ ಜಿಲ್ಲೆ ದೇವಾಲಯಗಳು, ಪು.೧೦೨

೫. ಅದೇ, ಪು.೧೦೨

೬. ಅದೇ, ಪು.೧೦೨

೭. ಅದೇ, ಪು.೧೦೪

೮. ಅದೇ, ಪು.೧೦೪

೯. ಅದೇ, ಪು.೧೦೪

೧೦. ಅದೇ, ಪು.೧೦೫

೧೧. ಅದೇ, ಪು.೧೦೫

೧೨. ಮಂಜುನಾಥ ಪಾಟೀಲ್, ೨೦೦೩, ದಾವಣಗೆರೆ ಜಿಲ್ಲೆ ಶಾಸನಗಳು : ಒಂದು ಸಾಂಸ್ಕೃತಿಕ ಅಧ್ಯಯನ, ಪು.೨೦೧

೧೩. ಅದೇ, ಪು.೨೦೧

೧೪. ಅದೇ, ಪು.೨೦೨

೧೫. ಅದೇ, ಪು.೨೦೨

೧೬. ತಿಪ್ಪೇಸ್ವಾಮಿ, ೨೦೦೦, ಪೂರ್ವೋಕ್ತ, ಪು.೧೦೭

೧೭. ಅದೇ, ಪು.೧೩೯

೧೮. ಅದೇ, ಪು.೧೩೯

೧೯. ಅದೇ, ಪು.೧೩೯

೨೦. ಅದೇ, ಪು.೧೩೫

೨೧. ಅದೇ, ಪು.೧೩೫

೨೨. ಅದೇ, ಪು.೧೦೮

೨೩. ಅದೇ, ಪು.೯೩

೨೪. ಅದೇ, ಪು.೯೩

೨೫. ಅದೇ, ಪು.೯೩

೨೬. ಅದೇ, ಪು.೧೭೫

೨೭. ರಾಜರಾಂ ಹೆಗಡೆ, ೧೯೯೨, ಭಾರತೀಯ ಮೂರ್ತಿ ಶಾಸ್ತ್ರ, ಧರ್ಮ ದೇವತಾರಾಧನೆ ಹಾಗೂ ಸಾಂಸ್ಕೃತಿಕ ಇತಿಹಾಸ ವಿಶ್ಲೇಷಣೆ, ಅರಿವು ಬರಹ, ಪು.೩೫ ೩೬

೨೮. ತಿಪ್ಪೇಸ್ವಾಮಿ, ೨೦೦೦, ಪೂರ್ವೋಕ್ತ, ಪು.೧೭೫

೨೯. ರಾಮಚಂದ್ರರಾವ್ ಎಸ್.ಕೆ., ೧೯೭೫, ಮೂರ್ತಿಶಿಲ್ಪ ನೆಲೆ ಮತ್ತು ಹಿನ್ನೆಲೆ, ಪು.೫೦

೩೦. ಸುಂದರ ಅ., ೧೯೯೪, ದೇವಾಲಯ ಮೂರ್ತಿಶಿಲ್ಪ ಚೈತ್ರಾಲಯ ಒಂದು ವಿಶ್ಲೇಷಣೆ, ಪು. ೭೨

೩೧. ಚಿದಾನಂದಮೂರ್ತಿ, ೧೯೭೯, ಕರ್ನಾಟಕ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೯೫

೩೨. ಅದೇ, ಪು.೪೯೫

೩೩. ತಿಪ್ಪೇಸ್ವಾಮಿ, ೨೦೦೦, ಪೂರ್ವೋಕ್ತ, ಪು.೪೭೬

೩೪. ಅದೇ, ಪು.೧೮೨

೩೫. ಅದೇ, ಪು.೧೮೨

೩೬. ಶಿವಲೀಲಾ, ೨೦೦೨, ಕಮಲಾಪುರ ಶಾಸನಗಳು ಮತ್ತು ದೇವಾಲಯಗಳು, ಪು.೧೦೬

೩೭. ಶಿವಲೀಲಾ, ೨೦೦೨, ಪೂರ್ವೋಕ್ತ, ಪು.೧೨೫

೩೮. ರಾಜಶೇಖರ ಬಸುಪಟ್ಟದ, ೨೦೦೫, ಚಿತ್ತರಗಿ ಇಳಕಲ್ಲು ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನ ಮಠ, ಪು.೧೫

೩೯. ಸಂಕ್ಷಿಪ್ತ ಕನ್ನಡ ನಿಘಂಟು, ೨೦೦೨, ಪು.೯೬೪

೪೦. ರಾಜಶೇಖರ ಬಸುಪಟ್ಟದ, ಪೂರ್ವೋಕ್ತ, ಪು.೧೬

೪೧. ಚಂದ್ರಶೇಖರ ನಾರಯಣಾಪುರ, ೨೦೦೨, ಕರ್ನಾಟಕ ವೀರಶೈವ ಮಠಗಳು, ಪು.೫೦೩

## ಅಧ್ಯಾಯ ೫

# ನೀಲಗುಂದ ಪರಿಸರದ ಸಂಸ್ಕೃತಿ

೫

# ನೀಲಗುಂದ ಪರಿಸರದ ಸಂಸ್ಕೃತಿ

## ೫.೧. ಸಾಮಾಜಿಕ ಸ್ಥಿತಿಗತಿ

ನಮ್ಮ ದೇಶವು ಹಳ್ಳಿಗಳ ದೇಶ. ಗ್ರಾಮಗಳೇ ಭಾರತದ ಜೀವಾಳ. ಗ್ರಾಮಗಳ ವ್ಯವಸ್ಥೆ ಪ್ರಜಾಪ್ರಭುತ್ವ ವ್ಯವಸ್ಥೆಯಾಗಿದ್ದು, ಇಲ್ಲಿ ಎಲ್ಲ ಜನರೂ ಒಟ್ಟಾಗಿ ಕೂಡಿ ಬಾಳುವ ವ್ಯವಸ್ಥೆ ಇದೆ. ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನಲ್ಲಿ ಬರುವ ಹಲವು ಪಾಳೇಪಟ್ಟುಗಳ ಆಡಳಿತಕ್ಕೆ ಒಳಪಟ್ಟ ನೀಲಗುಂದ ಪರಿಸರದ ಗ್ರಾಮಗಳು ಧಾರ್ಮಿಕ ನೆಲೆಗಟ್ಟಿನಲ್ಲಿ ಸಾಮಾಜಿಕ ಸ್ಥಿತಿಯನ್ನು ಮೈಗೂಡಿಸಿಕೊಂಡಿದೆ.

### ಜಾತಿ ವ್ಯವಸ್ಥೆ

ಈ ಪರಿಸರದ ವ್ಯಕ್ತಿಗಳು ಶ್ರಮ ಜೀವಿಗಳಾಗಿದ್ದು, ವಂಶ ಪರಂಪರೆಯಾಗಿ ಮುಂದುವರಿದುಕೊಂಡು ಬಂದ ತಮ್ಮ ವೃತ್ತಿ ವೈಶಿಷ್ಟ್ಯತೆಗಳನ್ನು ಉಳಿಸಿಕೊಂಡು ಬಂದುದೇ ಮುಂದೆ ಜಾತಿ ವ್ಯವಸ್ಥೆಗೆ ದಾರಿ ಮಾಡಿಕೊಟ್ಟಿತು. ಈ ಪ್ರದೇಶದಲ್ಲಿ ಎಲ್ಲಾ ಜನಾಂಗದವರು ನೆಲೆಸಿದ್ದು ಅವರ ಜನಸಂಖ್ಯೆ ವಿವರ ಕೆಳಗಿನಂತೆ ತಿಳಿಸಲಾಗಿದೆ. ವೀರಶೈವರು ೨೦೦೦, ವಾಲ್ಮೀಕಿ ಜನಾಂಗ ೩೦೦೦, ಕುರುಬರು ೩೦೦೦, ಗೊಲ್ಲರು ೨೦೦೦, ಮುಸ್ಲಿಮರು ೨೦೦೦, ಮಡಿವಾಳ ೪೦೦, ಉಪ್ಪಾರರು ೧೦೦೦, ಹರಿಜನರು ೧೫೦೦, ಬ್ರಾಹ್ಮಣರು-೫೦ ಇಷ್ಟೆಲ್ಲಾ ಜನಾಂಗವಿದ್ದರೂ ತಮ್ಮ ತಮ್ಮ ಜಾತಿಗೆ ಅನುಗುಣವಾಗಿ ವೃತ್ತಿಯನ್ನು ಅವಲಂಬಿಸಿಕೊಂಡಿದ್ದಾರೆ.

ಇಲ್ಲಿಯ ಜನರು ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಭಾವನಾತ್ಮಕ ಸಂಬಂಧವನ್ನು ಹೊಂದಿರುವುದು ಕಂಡುಬರುತ್ತದೆ. ಈ ಪರಿಸರದ ಪ್ರಮುಖ ದೇವಾಲಯಗಳಲ್ಲಿ ಪ್ರವೇಶಿಸಲು ಯಾವುದೇ ಜನಾಂಗಕ್ಕೆ ನಿರ್ಬಂಧವಿಲ್ಲ. ಕೆರೆ, ಬಾವಿ, ಮಠ ಇತ್ಯಾದಿಗಳಲ್ಲಿ ಮುಕ್ತವಾದ ಅವಕಾಶವನ್ನು ಈ ಪರಿಸರ ಹೊಂದಿದೆ. ಹಬ್ಬ ಹರಿದಿನಗಳಲ್ಲಿ ಹಿಂದೂ, ಮುಸ್ಲಿಂ ಗೊಲ್ಲರು ವಾಲ್ಮೀಕಿ ಎಂಬ ಭೇದಭಾವವಿಲ್ಲದೆ ಒಗ್ಗೂಡಿ ಹಬ್ಬಗಳನ್ನು ಆಚರಿಸುತ್ತಾರೆ. ತಮ್ಮ ದೈನಂದಿನ ಕೆಲಸಗಳ ಮೂಲಕ ಆತ್ಮೀಯತೆಯಿಂದ ಜಾತಿ ವೈಷಮ್ಯಗಳಿಲ್ಲದೇ ಸಮಾಜದ ಐಕ್ಯತೆಯನ್ನು ಮೂಡಿಸುವಲ್ಲಿ ಈ ಪರಿಸರದ ಜನರು ಆದರ್ಶ ಪ್ರಾಯವಾಗಿದ್ದಾರೆ.

**ಕಸುಬು**

ನೀಲಗುಂದ ಪರಿಸರದಲ್ಲಿ ಬರುವ ರೈತರು ಶೇ.೮೦ರಷ್ಟು ಜನರು ವ್ಯವಸಾಯಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದ್ದಾರೆ. ವರ್ಷದಲ್ಲಿ ಎರಡು ಬೆಳೆಗಳನ್ನು ಬೆಳೆಯುತ್ತಾರೆ. ಅದರಲ್ಲಿ ಮುಖ್ಯವಾಗಿ ಆರ್ಥಿಕ ಬೆಳೆಗಳಾದ ಮೆಕ್ಕೆಜೋಳ, ಹತ್ತಿ, ಈರುಳ್ಳಿ, ಮೆಣಸಿನಕಾಯಿ ಇತ್ಯಾದಿಗಳನ್ನು ಬೆಳೆಯುತ್ತಾರೆ. ಸುಗ್ಗಿಯಲ್ಲಿ ಸಾಮಾನ್ಯ ವರ್ಗದವರು ತಮ್ಮ ಬಡತನದ ಸ್ಥಿತಿಯನ್ನು ಸುಧಾರಿಸಿಕೊಳ್ಳುತ್ತಾರೆ. ಅದೇ ಶ್ರೀಮಂತರಾದರೆ ಜನವರಿ ತಿಂಗಳಲ್ಲಿ ಸುಗ್ಗಿಯನ್ನು ಮುಗಿಸುತ್ತಾರೆ. ಅಂದರೆ ಇತ್ತೀಚಿನ ವರ್ಷಗಳಲ್ಲಿ ಮಳೆಯ ಅಭಾವ ಹೆಚ್ಚಾಗಿರುವುದರಿಂದ ಕೆಲವು ಕುಟುಂಬ ಆರ್ಥಿಕವಾಗಿ ಬಲಾಢ್ಯರಾಗಲು ಕೊಳವೆ ಬಾವಿಯನ್ನು ಕೊರೆಸುತ್ತಾರೆ. ಇದರಿಂದ ಬಂದ ಲಾಭದಿಂದ ಸ್ಥಿತಿಯನ್ನು ಸುಧಾರಿಸಿಕೊಳ್ಳುತ್ತಾರೆ.

ಕುಂಚೂರು ಮತ್ತು ಹಲುವಾಗಲು ಗ್ರಾಮದಲ್ಲಿ ಸುಮಾರು ೫೦ಕ್ಕೂ ಹೆಚ್ಚು ಮನೆಗಳಲ್ಲಿ ಮಹಿಳೆಯರು ಬೀಡಿ ಕಟ್ಟುವುದನ್ನು ಮೂಲವೃತ್ತಿಯನ್ನಾಗಿ ಮಾಡಿಕೊಂಡು ಜೀವನ ಸಾಗಿಸುತ್ತಾರೆ. ಪುರುಷರು ಗೋಡೆ ಕಟ್ಟುವುದು, ಹಮಾಲಿ ಮಾಡುವುದು, ಇನ್ನೂ ಕೆಲವರು ಹಸುಗಳನ್ನು ಸಾಕಿ ಹಾಲಿನಿಂದ ಬಂದ ಹಣದಿಂದ ಬದುಕನ್ನು ಸಾಗಿಸುತ್ತಿದ್ದಾರೆ. ಅತಿ ಕೆಳವರ್ಗದವರು ಅಲ್ಲಿಯ ಶ್ರೀಮಂತರ ಮನೆಯಲ್ಲಿ ಆಳುಗಳಾಗಿ ಕೆಲಸವನ್ನು ಮಾಡುತ್ತಾರೆ. ಕೆಲವರು ಪ್ರತಿದಿನ ಕೂಲಿ ಮಾಡುತ್ತಾರೆ. ಮೇಲುವರ್ಗದವರು ಅಂಗಡಿಗಳನ್ನು ತೆರೆದು ಆ ಪರಿಸರ ಬೆಳೆಗಳನ್ನು ತೂಕ ಹಾಕಿಸಿಕೊಳ್ಳುವುದರ ಜೊತೆಗೆ ವ್ಯಾಪಾರವನ್ನು ಮಾಡುವರು. ಹಸು, ಕುರಿ, ಎಮ್ಮೆ ಇತ್ಯಾದಿ ಪ್ರಾಣಿಗಳ ವ್ಯವಹಾರವನ್ನು ಮಾಡುತ್ತಾ ಜೀವನ ಸಾಗಿಸುತ್ತಿರುವುದನ್ನು ಈ ನೀಲಗುಂದ ಪರಿಸರದಲ್ಲಿ ನೋಡಬಹುದು. ಇದರ ಜೊತೆಯಲ್ಲಿ ಮೂಲ ಕಸುಬುಗಳಾದ ಕುಂಬಾರ, ಕಮ್ಮಾರ, ಮಡಿವಾಳ, ಇವರು ತಮ್ಮ ದೈನಂದಿನ ಬದುಕಿನಲ್ಲಿ ವಂಶ ಪರಂಪರೆಯಿಂದ ಬಂದ ವೃತ್ತಿಗಳನ್ನು ಮಾಡುತ್ತಾರೆ. ಇವರಲ್ಲಿ ಕೆಲವರು ಇತರೆ ವೃತ್ತಿಗಳಿಗೂ ಪಲ್ಲಟಗೊಂಡಿದ್ದಾರೆ. ಕುಂಬಾರ ಗಡಿಗೆ ಮಾಡುವುದು ಒಂದು ಸಂಪ್ರದಾಯ. ಆದರೆ ಈ ಆಧುನಿಕ ಯುಗದಲ್ಲಿ ಅವನ ಬೇಡಿಕೆ ೮೦ರಷ್ಟು ಕಡಿಮೆಯಾಗಿರುವುದರಿಂದ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಅವನು ಮೂಲ ವೃತ್ತಿ ಬಿಟ್ಟಿರುವುದನ್ನು ನೋಡಬಹುದು. ಅದೇ ರೀತಿಯಾಗಿ ಕಮ್ಮಾರ, ಮಡಿವಾಳ, ಅಕ್ಕಸಾಲಿಗ ಇತ್ಯಾದಿ ಜನಾಂಗದವರು ತಮ್ಮ ಮೂಲವೃತ್ತಿಯನ್ನು ತ್ಯಜಿಸುವುದನ್ನು ಆಧುನಿಕ ಯುಗ ದಲ್ಲಿ ನಾವು ನೋಡಬಹುದು.

**ಉಡುಪು**

ಭಾರತೀಯ ಸಂಸ್ಕೃತಿಯನ್ನು ಬಿಂಬಿಸುವುದು ಗ್ರಾಮೀಣ ಉಡುಪು. ಈ ಪ್ರದೇಶದ ಸಂಪ್ರದಾಯದಂತೆ ಪುರುಷರು ಪಂಚೆ, ಅಂಗಿ, ಪೇಟ ಇತ್ಯಾದಿಗಳನ್ನು ಧರಿಸಿದರೆ, ಸ್ತ್ರೀಯರು ಸೀರೆ, ಲಂಗ, ದಾವಣಿ ಇತ್ಯಾದಿಗಳನ್ನು ಧರಿಸುತ್ತಾರೆ. ಈ ಪರಿಸರದಲ್ಲಿ ಹೆಚ್ಚಿನ ಮಟ್ಟದಲ್ಲಿ ಬಡತನ ರೇಖೆಗಿಂತ ಕೆಳಗೆ

ಇರುವವರ ಸಂಖ್ಯೆ ಹೆಚ್ಚು ಕಂಡುಬರುತ್ತದೆ. ಹಾಗಾಗಿ ಒಳ್ಳೆಯ ಬಟ್ಟೆಗಳನ್ನು ಸಹ ಧರಿಸುವ ಜನರು ಕಂಡುಬರುವುದಿಲ್ಲ. ಅದರಲ್ಲಿ ಬೋವಿ, ಗೊಲ್ಲರು ಕೊರಚ ಜನಾಂಗದ ಮಹಿಳೆಯರು ಅಂದರೆ ವಯಸ್ಸಾದ ಮಹಿಳೆಯರು ಅರೆಬರೆ ಬಟ್ಟೆಗಳನ್ನು ಧರಿಸುವುದು ಕಂಡುಬರುತ್ತದೆ. ಹೀಗಾಗಿ ಇಲ್ಲಿ ಆರ್ಥಿಕ ಸಮಸ್ಯೆ ಎದ್ದು ಕಾಣುತ್ತದೆ.

## ಸಂಪ್ರದಾಯ

ನಮ್ಮ ಬದುಕಿನಲ್ಲಿ ಅನೇಕ ಪದ್ಧತಿ ಆಚರಣೆ, ನಂಬಿಕೆ, ಕಲ್ಪನೆಗಳಿಗೆ ಅವಕಾಶಗಳನ್ನು ಕೊಟ್ಟು ಇವುಗಳನ್ನು ಒಂದು ಸಂಪ್ರದಾಯವೆಂಬಂತೆ ಪಾಲಿಸುತ್ತಿದ್ದೇವೆ. ಇಂತಹ ನಂಬಿಕೆ ಮತ್ತು ಸಂಪ್ರದಾಯಗಳನ್ನು ಪ್ರಾಚೀನ ಕಾಲದಿಂದಲೂ ರೂಪಿಸಿಕೊಂಡು ಬಂದಿದ್ದಾರೆ. ಈ ಆಚರಣೆಗಳು ನೀಲಗುಂದ ಪರಿಸರದಲ್ಲಿ ಬರುವ ಜಾತಿಧರ್ಮಗಳ ಹಿನ್ನೆಲೆಯಲ್ಲಿ ಅವಲಂಬಿತವಾಗಿವೆ. ಧ್ಯಾನ, ದಾನ, ವ್ರತ, ಆಚರಣೆ, ಹಬ್ಬ-ಆಚಾರ-ವಿಚಾರ ನಡವಳಿಕೆ, ಪೂಜೆ, ತೀರ್ಥಕ್ಷೇತ್ರ, ಪಾಪ-ಪುಣ್ಯಗಳ ಕಲ್ಪನೆ ಆಳವಾಗಿ ಬೇರುಬಿಟ್ಟಿದೆ. ಉದಾಹರಣೆಗೆ ನಾಗರ ಪಂಚಮಿ ಹಬ್ಬದಲ್ಲಿ ಹುತ್ತಕ್ಕೆ ಹಾಲು ಎರೆಯುವುದು, ದಸರಾ ಹಬ್ಬದಲ್ಲಿ ಬನ್ನಿ ಕೊಡುವುದು ಇತ್ಯಾದಿ ಸಂಪ್ರದಾಯ ಈ ಪರಿಸರದಲ್ಲಿ ಆಚರಿಸುವುದು ಕಂಡುಬರುತ್ತದೆ.

## ಮನೋರಂಜನೆ

ನೀಲಗುಂದ ಪರಿಸರದಲ್ಲಿ ಬರುವ ಗ್ರಾಮಗಳಲ್ಲಿ ಮನೋರಂಜನೆ ಪಡೆಯುವ ಉದ್ದೇಶದಿಂದ ವಿವಿಧ ಚಟುವಟಿಕೆಗಳು ನಡೆಯುತ್ತವೆ. ಇದರಲ್ಲಿ ನಾಟಕವಾಡುವುದು, ಹುಲಿ, ಕರಡಿ, ಇತರ ವೇಷಗಳನ್ನು ಹಾಕಿಕೊಂಡು ಕುಣಿಯುವುದು ಪ್ರಮುಖವಾದುವು. ಮನೋರಂಜನೆಗೆ ವಿವಿಧ ಕ್ರೀಡೆಗಳನ್ನು ಆಡುತ್ತಾರೆ. ಅಲ್ಲದೆ ಈ ಪರಿಸರದಲ್ಲಿ ವಿಶೇಷವಾದ ತೊಗಲು ಗೊಂಬೆಯಾಟವನ್ನು ಹಲುವಾಗಲು ಗ್ರಾಮದಲ್ಲಿ ಬರುವ ದೇವೇಂದ್ರ ಮತ್ತು ಪತ್ತಾರ ವೀರಣ್ಣ ಹಾಗೂ ಹಲವಾರು ಜನರು ಆಡುತ್ತಾರೆ. ಇದನ್ನು ಗುರುತಿಸಿ ಸರ್ಕಾರವು ರಾಜ್ಯ ಪ್ರಶಸ್ತಿ ನೀಡಿ ಗೌರವಿಸಿದೆ. ಹಾಗಾಗಿ ಈ ಪರಿಸರವು ಜನಪದದ ವಿಶೇಷ ತಾಣವೆಂದು ಹೇಳಬಹುದಾಗಿದೆ.

## ಮಹಿಳೆಯರ ಸ್ಥಾನಮಾನ

ಈ ಪರಿಸರದ ಮಹಿಳೆಯರಿಗೆ ಪುರುಷರಂತೆ ಸಮಾನವಾದ ಸ್ಥಾನವನ್ನು ನೀಡಿದ್ದಾರೆ. ಅದರಲ್ಲೂ ಕೆಲವು ವಿಷಯಗಳಲ್ಲಿ ನಿರ್ಬಂಧಗಳಿವೆ. ವಿಧವೆಯರು ಮಂಗಳ ಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ. ಹಣೆಗೆ ಕುಂಕುಮ, ಹೂವು, ಹಸಿರುಬಳೆ ಇಡುವಂತಿಲ್ಲ. ಹೀಗೆ ಅವರಿಗೆ ಆಚರಣೆಗಳ ಸಂಬಂಧಕವಾಗಿ ಹಲವು ನಿಯಮಗಳನ್ನು ನಮ್ಮ ಸಮಾಜ ರೂಪಿಸಿದೆ. ನಮ್ಮ ಕಡೆ ಬಳಕೆಯಲ್ಲಿರುವಂತೆಯೇ ನೀಲಗುಂದ ಪರಿಸರದ ಗ್ರಾಮಗಳಲ್ಲಿ ವಿಧವೆಯರನ್ನು ಅಮಂಗಳಕರವಾಗಿ ಕಾಣುತ್ತಾರೆ, ಅವರಿಗೆ ಯಾವುದೇ ರೀತಿಯಲ್ಲಿ ಗೌರವ ತೋರಿಸುವುದಿಲ್ಲ.

### ವಿದ್ಯಾಭ್ಯಾಸ

ನೀಲಗುಂದ ಪರಿಸರಕ್ಕೆ ಒಳಪಟ್ಟ ಚಿರಸ್ತಹಳ್ಳಿ, ನೀಲಗುಂದ, ಕುಂಚೂರು, ಹಲುವಾಗಲು ಈ ಗ್ರಾಮಗಳಲ್ಲಿ ಹಿಂದಿನ ಕಾಲದಲ್ಲಿ ಶಿಕ್ಷಣ ವ್ಯವಸ್ಥೆ ಹೇಗಿತ್ತೆಂದು ತಿಳಿಯಲು ಇಂದು ಯಾವ ಆಧಾರಗಳು ಇಲ್ಲದಿದ್ದರೂ ಅಗ್ರಹಾರ ಇದ್ದುದರ ಸಾಕ್ಷಿಯಾಗಿ ಅಂದಿನ ವಿದ್ಯಾಭ್ಯಾಸದ ಪ್ರಕ್ರಿಯೆಯನ್ನು ಅರಿಯಬಹುದು. ಅಂದರೆ ಇಂದು ಪ್ರತಿಯೊಂದು ಗ್ರಾಮದಲ್ಲೂ ಸರ್ಕಾರ ನಿರ್ಮಿಸಿದ ಶಾಲೆಗಳು ಇರುವುದರಿಂದ ಸಾಮಾನ್ಯವಾಗಿ ಎಲ್ಲ ಜಾತಿ ಜನಾಂಗದ ಮಕ್ಕಳು ವಿದ್ಯಾಭ್ಯಾಸ ಕಲಿಯುವಂತಹ ಸಂದರ್ಭ ಸೃಷ್ಟಿಯಾಗಿದೆ. ನೀಲಗುಂದ ಮತ್ತು ಹಲುವಾಗಲುಗಳಲ್ಲಿ ಪ್ರೌಢಶಾಲೆಗಳು ಇದ್ದರೆ, ಹಲುವಾಗಲು ಗ್ರಾಮದಲ್ಲಿ ಪದವಿಪೂರ್ವ ಕಾಲೇಜ್ ಸ್ಥಾಪಿಸಲ್ಪಟ್ಟದೆ. ಹೀಗಾಗಿ ಶಿಕ್ಷಣ ಮಟ್ಟ ಹೆಚ್ಚಲು ಅನುಕೂಲವಾಗಿದೆ.

ಪ್ರಾಥಮಿಕ ಹಂತದಲ್ಲಿ ಶೇಕಡವಾರು ಸರಾಸರಿ ೮೦ರಷ್ಟು ಮಕ್ಕಳು ವಿದ್ಯೆಯನ್ನು ಕಲಿಯುತ್ತಿದ್ದಾರೆ. ಈ ಹಂತದಲ್ಲಿ ಸರಿ ಸುಮಾರು ೧೨೦೦ ವಿದ್ಯಾರ್ಥಿಗಳು ವಿದ್ಯೆ ಕಲಿಯುವ ಬಗ್ಗೆ ದಾಖಲೆ ಇದೆ. ಹಾಗೆಯೇ ಪ್ರೌಢಶಾಲೆಯ ಹಂತದಲ್ಲಿ ಸುಮಾರು ೬೦೦ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಪದವಿ ಪೂರ್ವಕಾಲೇಜಿನ ದಾಖಲಾತಿ ಪ್ರಕಾರ ಸರಿಸುಮಾರು ೪೦ ವಿದ್ಯಾರ್ಥಿಗಳು ಅಭ್ಯಸಿಸುತ್ತಿದ್ದರೂ ಪಟ್ಟಣಗಳ ಕಡೆಗೆ ವಲಸೆ ಹೋಗಿ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ ಏನೂ ಇಲ್ಲ. ಅಂದರೆ ಒಟ್ಟಾರೆ ಶಿಕ್ಷಣ ವ್ಯವಸ್ಥೆಯನ್ನು ನೋಡಿದರೆ ಪುರುಷರಿಗಿಂತ ಮಹಿಳೆಯರ ಸಂಖ್ಯೆ ವಿದ್ಯಾಭ್ಯಾಸದಲ್ಲಿ ಹೆಚ್ಚು ಇರುವುದನ್ನು ಗಮನಿಸಬಹುದು. ಇದಕ್ಕೆ ಕಾರಣ ಸರ್ಕಾರವು ಇದೀಗ ಘೋಷಿಸಿರುವ ಸೌಲಭ್ಯಗಳು. ಹೀಗಾಗಿ ಫಲಿತಾಂಶ ಶೇ.೭೫ರಷ್ಟು ಇರುವುದನ್ನು ಗಮನಿಸಬಹುದಾಗಿದೆ. ನೀಲಗುಂದ ಪರಿಸರದಲ್ಲಿ ಉನ್ನತ ಶಿಕ್ಷಣವನ್ನು ಪಡೆದವರಿಗೇನೂ ಕಡಿಮೆ ಇಲ್ಲ. ಬಿ.ಎ, ಬಿ.ಎಸ್ಸಿ, ಎಂ.ಎ, ಎಂ.ಎಸ್ಸಿ, ಬಿ.ಇ. ಮುಂತಾದ ಶಿಕ್ಷಣವನ್ನು ಪಡೆದುಕೊಂಡು ತಮ್ಮದೇ ಆದ ಕಾರ್ಯಭಾರಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಬಹುಶಃ ಇವರಿಗೆ ಈಗಿನ ಪೀಳಿಗೆಯವರು ಪ್ರೇರಕರು ಹಾಗೂ ಪ್ರೋತ್ಸಾಹಕರಾಗಿದ್ದಾರೆ ಎಂದರೆ ತಪ್ಪಾಗಲಾರದು. ಒಟ್ಟಿನಲ್ಲಿ ಹಿಂದಿನ ನೀಲಗುಂದ ಪರಿಸರದ ವಿದ್ಯಾಭ್ಯಾಸ ಸಮಾಧಾನಕರ ಅಷ್ಟೇ ಅಲ್ಲ ತೃಪ್ತಿದಾಯಕವೂ ಆಗಿದೆ.

### ೫.೨. ಆರ್ಥಿಕ ಸ್ಥಿತಿ

ನೀಲಗುಂದ ಪರಿಸರದಲ್ಲಿ ಆರ್ಥಿಕ ಸ್ಥಿತಿಯನ್ನು ತಿಳಿಯಲು ಈ ಪ್ರದೇಶದ ಭೂಮಿಯ ವೈವಿಧ್ಯತೆ, ನೀರನ ಸೌಕರ್ಯ, ಬೀಳುವ ಮಳೆಯ ಪ್ರಮಾಣ, ಅರಣ್ಯ ಸಂಪತ್ತು, ಮೂಲ ಕಸುಬು, ಕೈಗಾರಿಕೆ ಮೊದಲಾದ ಅಂಶಗಳಿಂದ ನಿರ್ಧರಿಸಬಹುದು. ಅಲ್ಲದೆ ಈ ಪರಿಸರದಲ್ಲಿ ದೊರೆಯುವ ಶಾಸನಗಳ ಉಲ್ಲೇಖಗಳಿಂದ ತಿಳಿಯಲು ಸಹಾಯಕವಾಗಿವೆ.

ಈ ಪರಿಸರದ ಭೂಮಿಯು ಹೆಚ್ಚಾಗಿ ವ್ಯವಸಾಯಕ್ಕೆ ಅನುಕೂಲಗಿದ್ದು ಬಂಜರು ಭೂಮಿ ಕಡಿಮೆ ಇದೆ. ಯೋಗ್ಯವಾದ ಭೂಮಿಯಲ್ಲಿ ಮಳೆಯ ಅನುಕೂಲತೆ ಮತ್ತು ನೀರಿನ ಸೌಕರ್ಯದಿಂದ ಬೆಳೆಯನ್ನು

ಬೆಳೆಸಲು ಸಾಧ್ಯ. "ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ಕೆಯ್ ಎಂದು, ಮಳೆಯನ್ನು ಅವಲಂಬಿಸದ ಸಾಗುವಳಿ ಮಾಡುತ್ತಿದ್ದ ಭೂಮಿಯನ್ನು ದೇವಮಾತೃಕವೆಂದು, ಕೆರೆ ಬಾವಿಗಳನ್ನವಲಂಬಿಸಿದ ಭೂಮಿಯಲ್ಲಿ ನದಿಮಾತೃಕವೆಂದು ಕರೆಯಲಾಗುತ್ತಿತ್ತು. ಭೂಮಿಯ ಗುಣ ಸ್ವರೂಪಗಳನ್ನವಲಂಬಿಸಿ ಕೃಷಿ ಭೂಮಿಯನ್ನು ಎಲೆ ಭೂಮಿ ಕೆನ್ನಲು, ಕಿಸುಕಾಡು, ತೆಕ್ಕಿಲ ಮೊದಲಾದ ಪ್ರಕಾರಗಳಿರುವುದು ಶಾಸನಗಳಲ್ಲಿ ಕಂಡುಬರುತ್ತವೆ."[7]

## ವ್ಯವಸಾಯ

ಪರಂಪರೆಯಾಗಿ ಬೆಳದುಬಂದ ವ್ಯವಸಾಯವೇ ನೀಲಗುಂದ ಪರಿಸರದ ಆರ್ಥಿಕ ವ್ಯವಸ್ಥೆಯ ಮೂಲವಾಗಿದೆ. ಈ ಪರಿಸರದ ಬಹುಪಾಲು ಜನರ ಜೀವನೋಪಾಯದ ಮುಖ್ಯ ಕಸುಬು ಕೃಷಿ, ವ್ಯಾಪಾರ, ಉದ್ಯೋಗ ಮತ್ತು ಅದನ್ನು ಆವರಿಸಿದ ಕೈಗಾರಿಕೆಗಳು ಸೇರಿ ಜನರ ಆದಾಯದ ಮೂಲಬಿಂದುವಾಗಿದ್ದು, ದಾನ ವಸ್ತುಗಳನ್ನು ವ್ಯವಸಾಯದ ಯೋಗ್ಯ ಭೂಮಿಗೆ ಪ್ರಥಮ ಪ್ರಾಶಸ್ತ್ಯವಿದ್ದಿತು. ಅದುದರಿಂದ ಕನ್ನಡ ನಾಡಿನ ಬಹುಪಾಲು ಶಾಸನಗಳು ಭೂಮಿ ದಾನಕ್ಕೆ ಸಂಬಂಧಿಸಿದೆ. ಈ ಪರಿಸರ ಶಾಸನಗಳಲ್ಲಿ ದೇವಾಲಯಗಳ ಜೀರ್ಣೋದ್ಧಾರಕ್ಕೆ ಭೂಮಿಯನ್ನು ನೀಡಿದುದು ಉಲ್ಲೇಖವಾಗಿದೆ. ಶಂಕರ ಲಿಂಗದೇವಾಲಯ ಮುಂಭಾಗ ಶಾಸನ, ನೀಲಗುಂದ ಭೀಮೇಶ್ವರ ದೇವಾಲಯ ಮುಂಭಾಗದ ಶಾಸನ, ಕಂಚೂರು ಕಲ್ಲೇಶ್ವರ ದೇವಾಲಯದ ಮುಂಭಾಗದ ಶಾಸನ, ಹಲುವಾಗಲು-ಕಲ್ಲೇಶ್ವರ ದೇವಾಲಯದ ಒಳಗಿನ ಶಾಸನಗಳಲ್ಲಿ ಭೂಮಿಯನ್ನು ದೇವರ ನೈವೇದ್ಯಕ್ಕಾಗಿ ನೀಡಿದ ಉಲ್ಲೇಖಗಳಿವೆ.

ಬೆಳೆಗಳು : ನೀಲಗುಂದ ಪರಿಸರದಲ್ಲಿ ಹೊಲಗಳು, ತೋಟಗಳಲ್ಲದೆ ಗದ್ದೆಗಳೂ ಇವೆ. ಕೆರೆಯ ನೀರಿನ ಆಶ್ರಯವಿದ್ದಲ್ಲಿ ಭತ್ತವನ್ನು ಬೆಳೆಯಲಾಗುತ್ತದೆ. ಜೋಳ, ಮೆಕ್ಕಜೋಳ, ರಾಗಿ, ತಂಬಾಕು, ಹೆಸರು ಮುಂತಾದ ಆಹಾರ ಧಾನ್ಯಗಳನ್ನು ಬೆಳೆಯುತ್ತಾರೆ.

ನೀರಾವರಿ : ನೀಲಗುಂದ, ಕುಂಚೂರು, ಹಲುವಾಗಲು, ಚಿರಸ್ತಹಳ್ಳಿ ಈ ಗ್ರಾಮಗಳಲ್ಲಿ ಕೆರೆಯ ನೀರಿನಿಂದ ಉತ್ತಮ ಬೆಳೆಯನ್ನು ಬೆಳೆಯುತ್ತಾರೆ. ಅಲ್ಲದೆ ಹಲುವಾಗಲು ಗ್ರಾಮದ ಪಶ್ಚಿಮ ಭಾಗದಲ್ಲಿ ತುಂಗಭದ್ರೆಯು ಉತ್ತರಕ್ಕೆ ಹರಿಯುವುದರಿಂದ ಇಲ್ಲಿಯ ಜನತೆಯು ನಾಲೆ(ಪೈಪು)ಗಳ ಮೂಲಕ ತಮ್ಮ ಭೂಮಿಗೆ ನೀರು ತಂದುಕೊಂಡು ಉತ್ತಮ ಬೆಳೆಯನ್ನು ಬೆಳೆದು ಆರ್ಥಿಕ ಸ್ಥಿತಿಯನ್ನು ಸುಧಾರಿಸುವುದು ಕಾಣಬಹುದು. ಈ ಪರಿಸರದಲ್ಲಿ ನೀರಾವರಿಗೆ ಹೆಚ್ಚಿನ ಆದ್ಯತೆ ನೀಡಿರುವುದು ಕಂಡುಬರುತ್ತದೆ. ಈ ಶತಮಾನದಲ್ಲಿ ನೀಲಗುಂದ ಭೀಮೇಶ್ವರ ದೇವಾಲಯದಲ್ಲಿ ಕಂಡುಬಂದ ಶಾಸನದಲ್ಲಿ ಬರಿಸೆಟ್ಟಿ ಎಂಬುವರು ಬಾರಿಕೆರೆಯ ತೂಬನು ಜೀರ್ಣೋದ್ಧಾರ ಮಾಡಿದ ಉಲ್ಲೇಖವಿದೆ.[8] ಈ ಪರಿಸರದಲ್ಲಿ ನೀರಿನ ಸೌಲಭ್ಯ ಉಪಯೋಗಿಸಿಕೊಂಡು ಸ್ವಲ್ಪಮಟ್ಟಿಗೆ ಆರ್ಥಿಕ ಸ್ಥಿತಿಯನ್ನು ಸುಧಾರಿಸಿರಬಹುದು.

**ಭೂಮಾಲೀಕತ್ವ :** ಈ ಪರಿಸರದಲ್ಲಿ ಹೆಚ್ಚಿನ ಶಾಸನಗಳು ದಾನ ಶಾಸನಗಳಾಗಿದ್ದು, ಅವುಗಳಲ್ಲಿ ಭೂಮಿ, ತೋಟ, ಅಡಕೆತೋಟ, ಗದ್ದೆ ದಾನವಾಗಿ ಚಿರಸ್ತಹಳ್ಳಿಯ ವೀರನಿಗೆ ನೀಡಿದ ಉಲ್ಲೇಖವಿದೆ.[೩] ಈ ಭೂದಾನ ದತ್ತಿ ವಿವರಗಳನ್ನು ಗಮನಿಸಿದರೆ, ಆ ದಾನಿಗಳು ಸ್ವತಃ ಭೂಮಾಲೀಕರಾಗಿರಬೇಕು. ಈ ದಾನಿಗಳು ರಾಜರು, ಅಧಿಕಾರಿಗಳು ಮತ್ತು ಜನ ಸಾಮಾನ್ಯರಾಗಿದ್ದು, ಎಲ್ಲ ವರ್ಗದವರೂ ದಾನಗಳನ್ನು ಮಾಡಿ ಹೆಸರು ವಾಸಿಗಳಾಗಿದ್ದಾರೆ. ಭೂ ಮಾಲೀಕತ್ವ ಹೊಂದಿದವರೆಲ್ಲಾ ವ್ಯವಸಾಯಗಾರರಾಗಿರ ಬೇಕೆಂಬುದೇನು ಇಲ್ಲ. ಅವರು ಬೇರೆ ಬೇರೆ ವೃತ್ತಿಗಳನ್ನು ಕೈಗೊಂಡಿದ್ದರೂ ತಮ್ಮ ಭೂಮಿಯನ್ನು ರೈತರಿಗೆ, ವ್ಯವಸಾಯಗಾರರಿಗೆ ಗುತ್ತಿಗೆ ಆಧಾರದ ಮೇಲೆ ಬೆಳೆ ಬೆಳೆಸಲು ಕೊಡುತ್ತಿದ್ದರು.

**ಪಶುಪಾಲನೆ :** ಭೂ ಸಾಗುವಳಿ ಮಾಡುವುದಕ್ಕೆ, ಬಾವಿಗಳಿಂದ ನೀರನ್ನು ಮೇಲೆತ್ತಲಿಕ್ಕೆ, ಬೆಳೆದ ಬೆಳೆಗಳನ್ನು ಮನೆಗೆ ಕೊಂಡೊಯ್ಯಲು, ಬೆಳೆದ ದವಸಧಾನ್ಯಗಳನ್ನು ಮಾರಾಟ ಮಾಡಲು ಇಂತಹ ಕಾರ್ಯಗಳಿಗೆ ಅಂದಿನಿಂದ ಇಂದಿನವರೆಗೆ ದನಗಳನ್ನೇ ಹೆಚ್ಚಾಗಿ ಅವಲಂಬಿಸಿದ್ದಾರೆ. ಅಲ್ಲದೆ ಪ್ರತಿನಿತ್ಯದ ಆಹಾರಕ್ಕೆ ಬೇಕಾದ ಹಾಲು, ಮೊಸರು(ತುಪ್ಪ), ಮಜ್ಜಿಗೆ ಒದಗಿಸುವುದು ಹಸು ಮತ್ತು ಎಮ್ಮೆಗಳೇ ಆದ್ದರಿಂದ ಹೆಚ್ಚಾಗಿ ಪಶುಪಾಲನೆ ಮಾಡುವುದು ಆರ್ಥಿಕ ವ್ಯವಸ್ಥೆಯ ಒಂದು ಭಾಗವಾಗಿತ್ತು. ಸಂಪತ್ತಿನ ಮೂಲಗಳಲ್ಲಿ ಒಂದಾದ ಹಸುಗಳನ್ನು ಅಪಹರಿಸುವುದು ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಜರುಗುತ್ತಿತ್ತು. ಈ ಪರಿಸರದಲ್ಲಿ ಬರುವ ನೀಲಗುಂದದ ಮುಕ್ತಿರಾಮೇಶ್ವರ ದೇವಾಲಯದ ಮುಂಭಾಗದ ಶಾಸನ, ಭೀಮೇಶ್ವರ ದೇವಾಲಯ ಆವರಣದ ಶಾಸನ,[೪] ತುರುಗೋಳ್ ಬಗ್ಗೆ ಉಲ್ಲೇಖಿಸುತ್ತವೆ. ಅದೇ ರೀತಿ ಈಗಲೂ ಅಂತಹ ವ್ಯವಸ್ಥೆ ನಡೆಯುತ್ತಲೇ ಇದೆ. ಒಟ್ಟಾರೆ ಪಶುಪಾಲನೆಯಿಂದ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಹಂಬಲಿಸುತ್ತಾರೆ.

**ವರ್ತಕರು :** ನೀಲಗುಂದದಲ್ಲಿ ಬರುವ ಮುಕ್ತಿರಾಮೇಶ್ವರ ದೇವಾಲಯದಲ್ಲಿ ನಿಲ್ಲಿಸಿದ ಶಾಸನದಲ್ಲಿ[೫] ೫೦೦ ವ್ಯಾಪಾರಿಗಳಾದ ಬಣಜಿಗರು ಮತ್ತು ಎಣ್ಣೆ ತೆಗೆಯುವ ತಲ್ಲಿಗರು ದೇವರಿಗೆ ದಾನ ನೀಡುವುದನ್ನು ಗಮನಿಸಿದರೆ, ಮೊದಲು ಈ ಪ್ರದೇಶ ವ್ಯಾಪಾರ ಕೇಂದ್ರವಾಗಿತ್ತೆಂದು ಊಹಿಸಬಹುದು. ಈಗ ನೀಲಗುಂದ ಪರಿಸರದ ವಾಣಿಜ್ಯ, ವ್ಯಾಪಾರ ಮತ್ತು ವರ್ತಕರ ಬಗ್ಗೆ ಗಮನಿಸಿದರೆ ವ್ಯವಸಾಯದಿಂದ ಬೆಳೆದ ಬೆಳೆಯನ್ನು ಸ್ಥಳೀಯ ವರ್ತಕರು ಖರೀದಿಸಿ, ತಾವು ಖರೀದಿಸಿದ ಧವಸ ಧಾನ್ಯಗಳನ್ನು ಪೇಟೆಗೆ ತೆಗೆದುಕೊಂಡು ಹೋಗಿ ದೊಡ್ಡ ವರ್ತಕರಿಗೆ ಮಾರಾಟ ಮಾಡುವುದನ್ನು ಕಾಣಬಹುದಾಗಿದೆ.

**ವಾಣಿಜ್ಯ ಕೇಂದ್ರ :** ಕ್ರಿ.ಶ.೧೦ ಮತ್ತು ೧೧ನೇ ಶತಮಾನದಲ್ಲಿ ಕೋಗಳಿ ೫೦೦ರ ಮುಖ್ಯ ಪಟ್ಟಣವೆಂದು ಉಲ್ಲೇಖಿಸಿರುವುದರಿಂದ[೬] ನೀಲಗುಂದವು ವ್ಯಾಪಾರ ಕೇಂದ್ರವಾಗಿರಬಹುದೆಂದು ಊಹಿಸಲಾಗಿದೆ. ಅದೇ ರೀತಿ ಹಲುವಾಗಲು ಗ್ರಾಮ ಸಹ ೧೨ನೇ ಶತಮಾನದಿಂದ ಪ್ರಮುಖ ನಗರವಾಗಿರಬಹುದೆಂದು ಊಹಿಸಲಾಗಿದೆ. ಈ ಎರಡು ಗ್ರಾಮಗಳು ಸ್ವಲ್ಪ ಸುಧಾರಣೆಯಾಗಿರುವುದರಿಂದ ಸುತ್ತಮುತ್ತಲಿನ ಹಳ್ಳಿಗಳಿಂದ ವ್ಯವಹಾರ ನಡೆಯುತ್ತದೆ.

ಈ ಪರಿಸರದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಸರ್ಕಾರವು ರೈತರಿಗೆ ಹಲವು ಸವಲತ್ತುಗಳನ್ನು ಕೊಡುತ್ತಿದೆ. ಸ್ಥಳೀಯ ಗ್ರಾಮಗಳಾದ ಹಲುವಾಗಲು ಸಹಕಾರ ಬ್ಯಾಂಕು, ಗ್ರಾಮೀಣ ಬ್ಯಾಂಕು, ಪ್ರಗತಿ ಪರ ಬ್ಯಾಂಕು. ಸ್ತ್ರೀಶಕ್ತಿ ಸಂಘಗಳಿಂದ ಹಣವನ್ನು ಪಡೆದುಕೊಂಡು ತಮ್ಮ ಕುಂದು ಕೊರತೆಗಳನ್ನು ಸುಧಾರಿಸಿಕೊಳ್ಳಲು ವಿವಿಧ ವೃತ್ತಿಗಳಿಗೆ ತೊಡಗಿಸಿ ಅದರಿಂದ ಬಂದ ಲಾಭದಿಂದ ಜೀವಿಸುವ ನೀಲಗುಂದ ಪರಿಸರದ ಜನತೆಯು ಆರ್ಥಿಕವಾಗಿ ಬಹಳ ಸುಧಾರಣೆ ಹೊಂದುತ್ತಿದ್ದಾರೆಂದು ದೃಢಪಡಿಸಲಾಗಿದೆ.

## ೫.೩. ಧಾರ್ಮಿಕ ವಿಧಿ-ವಿಧಾನಗಳು

ಮಾನವ ಜೀವನವನ್ನು ರೂಪಿಸುವಲ್ಲಿ, ಸಂಸ್ಕೃತಿಯನ್ನು ಪೋಷಿಸುವಲ್ಲಿ, ನಾಗರಿಕತೆಯನ್ನು ಬೆಳೆಸುವಲ್ಲಿ, ಧಾರ್ಮಿಕ ಸಂಪ್ರದಾಯ ಆಚರಣೆಗಳಿಗೆ ವಿಶೇಷ ಮಹತ್ವವಿದೆ. ಅವು ಬಾಳಿನ ಅವಿಭಾಜ್ಯ ಅಂಗಗಳಾಗಿವೆ. ಸಮಾಜವನ್ನು ಒಂದುಗೂಡಿಸುವಲ್ಲಿ ಮತ್ತು ಮುಂದಕ್ಕೊಯ್ಯುವ ಶಕ್ತಿಪುಂಜಗಳಾಗಿವೆ. ಪ್ರದೇಶದಿಂದ ಪ್ರದೇಶಕ್ಕೆ, ಜಾತಿಯಿಂದ ಜಾತಿಗೆ ವ್ಯತ್ಯಾಸಗೊಳ್ಳುವ ಕೆಲವು ಧಾರ್ಮಿಕ ಸಂಪ್ರದಾಯಗಳು ಸಾರ್ವಜನಿಕ ವ್ಯಾಪ್ತಿಯೊಳಗೆ ಸೇರದೆ ಪ್ರತ್ಯೇಕವಾಗಿಯೇ ನಿಲ್ಲುವುದುಂಟು.[೭]

ಸಂಪ್ರದಾಯಗಳನ್ನು ಸಮಾಜವೇ ನಿರ್ಮಾಣ ಮಾಡಿದ ವೈಯಕ್ತಿಕ ವಾಡಿಕೆಗಳು ಹಿರಿಯರಲ್ಲಿ ಅತೀವ ವಿಶ್ವಾಸ ವಹಿಸಿ ಜನ ಹಿಂದೆ ಮುಂದೆ ವಿಚಾರ ಮಾಡಿದ್ದನ್ನೆಲ್ಲಾ ಅಕ್ಷರಶಃ ಆಚರಿಸುತ್ತಾರೆ. ಹಿರಿಯರೆಂದ ಮೇಲೆ ಅವರ ಮಾತು ಕೇಳಬೇಕು. ಅವರು ನಡೆದದ್ದು ಅಥವಾ ಹೇಳಿದ್ದೆಲ್ಲಾ ತಪ್ಪೋ ಸರಿಯೋ ವಿಚಾರಿಸುವ ಗೋಜು ಅವರಿಗೆ ಬೇಕಾಗಿಲ್ಲ. ಹೀಗಾಗಿ ಸಂಪ್ರದಾಯಗಳು ಸಾಮೂಹಿಕ ಸ್ವರೂಪವನ್ನು ಪಡೆದುಕೊಂಡಿವೆ.[೮]

### ಪೂಜಾ ವಿಧಾನ

ನೀಲಗುಂದ, ಕುಂಚೂರು, ಹಲುವಾಗಲು, ಚಿರಸ್ತಹಳ್ಳಿ ಈ ಗ್ರಾಮದಲ್ಲಿರುವ ಬಸವಣ್ಣ, ಊರಮ್ಮ, ದುರ್ಗಮ್ಮ, ಆಂಜನೇಯ, ಕಲ್ಲೇಶ್ವರ, ಕರಿಬಸಜ್ಜ ಇನ್ನೂ ಅನೇಕ ದೇವರಿಗೆ ಪ್ರತಿದಿನ ಕೆಲವು ಭಕ್ತಾದಿಗಳು ಪೂಜೆಯನ್ನು ಮಾಡುತ್ತಾರೆ. ಆ ಪೂಜೆಗೆ ಮನೆಯಿಂದ ನೀರು ಇಲ್ಲವೇ ಪಕ್ಕದಲ್ಲಿರುವ ಬಾವಿ ಅಥವಾ ಕೆರೆಯ ನೀರನ್ನು ಹಾಕಿ ವಿಭೂತಿಯನ್ನು ಹಚ್ಚಿ, ಲೆಕ್ಕಿಪತ್ರೆ, ಗಂಧದ ಪತ್ರೆ, ಕರಿಕೆ ಪತ್ರೆ, ಬಿಲ್ವಪತ್ರೆ, ತುಂಬೆಹೂವು, ಬನ್ನಿಪತ್ರೆ, ಮಲ್ಲಿಗೆ ಹೂವು, ಸೇವಂತಿಗೆ, ಗುಲಾಬಿ ಮುಂತಾದ ಹೂವು ಮತ್ತು ಪತ್ರೆಯನ್ನು ದೇವರಿಗೆ ಮುಡಿಸಿ ಅಲಂಕರಿಸುತ್ತಾರೆ.

ಕೆಲವು ದೇವಾಲಯಗಳಲ್ಲಿ (ಗಂಡು ದೇವರಾದರೆ) ಪ್ರತಿ ವಾರದಲ್ಲಿ ಎರಡು ದಿನ ಅಂದರೆ ಸೋಮವಾರ ಮತ್ತು ಗುರುವಾರ ಅದೇ(ಸ್ತ್ರೀ ದೇವತೆಯಾದರೆ) ಮಂಗಳವಾರ ಮತ್ತು ಶುಕ್ರವಾರ, ಅಲ್ಲದೇ ಶನಿವಾರ ಆಂಜನೇಯ ದೇವರ ಪೂಜೆಯನ್ನು ಮಾಡುತ್ತಾರೆ. ಇದರಲ್ಲಿ ಕೆಲವು ನಿಯಮಗಳನ್ನು

ಬಳಸುತ್ತಾರೆ. ಗರ್ಭಗುಡಿಯ ಬಾಗಿಲನ್ನು ಹಾಕಿಕೊಂಡು ಪೂಜೆಯನ್ನು ಮಾಡುತ್ತಾರೆ. ಯಾಕೆಂದರೆ ಮೈಲಿಗೆಯವರ ದೃಷ್ಟಿ ದೇವರ ಮೇಲೆ ಬೀಳಬಾರದೆಂದು ಅವರ ನಂಬಿಕೆ. ಹಾಗೇನಾದರೂ ನೋಡಿದರೆ ದೇವರು ನಮಗೆ ಒಳ್ಳೆಯದನ್ನು ಮಾಡುವುದಿಲ್ಲ ಎಂಬಂತಹ ಸಂಪ್ರದಾಯ ಅರ್ಚಕರಿಗಿದೆ. ಇವರು ದೇವರ ಪೂಜೆ ಮಾಡಿ ಗಂಟೆ ಬಾರಿಸುತ್ತಾರೆ. ಆರತಿಯನ್ನು ಬೆಳಗುತ್ತಾರೆ. ಈ ರೀತಿಯಲ್ಲಿ ನೀಲಗುಂದ ಪರಿಸರದ ದೇವಾಲಯಗಳಲ್ಲಿ ಈ ಎಲ್ಲ ಆಚರಣೆ ಕಂಡುಬಂದಿವೆ.

**ಹರಕೆಗಳು**

ಧಾರ್ಮಿಕ ವಿಧಿ-ವಿಧಾನಗಳಲ್ಲಿ ಈ ಅಂಶವು ಬಹಳ ಮುಖ್ಯವಾಗಿದೆ. ಈ ಜಗತ್ತಿನಲ್ಲಿ ಜನಿಸಿದ ಮಾನವನಿಗೆ ಯಾವಾಗ ಅರಿವು-ಜ್ಞಾನ ಬಂತೋ ಅಂದೇ ದೇವರ ಮೊರೆ ಹೋದನು. ಆಗಲೇ ಹರಕೆಗಳು ಜನನವಾದವು. ಅಂದಿನಿಂದ ಇಂದಿನವರೆಗೂ ಈ ಸಂಪ್ರದಾಯ ಬೆಳೆದು ಬಂದಿವೆ. ಅಂದರೆ ನಂಬಿಕೆ ಮತ್ತು ಹರಕೆಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಅವನಿಗೆ ಆಪತ್ತು, ತೊಂದರೆ ಬಂದಾಗ ಆ ಕಷ್ಟವನ್ನು ನಿವಾರಣೆ ಮಾಡಿಕೊಳ್ಳುವುದಕ್ಕಾಗಿ ಮುಡುಪು ಕಟ್ಟುವುದು, ಬೆತ್ತಲೆ ಸೇವೆ ಮಾಡುವುದು, ದೀಡು ನಮಸ್ಕಾರ ಹಾಕುವುದು, ಒಡವೆಗಳನ್ನು ದೇವರಿಗೆ ಒಪ್ಪಿಸುವುದು, ವಿವಿಧ ರೀತಿಯ ಅಭಿಷೇಕ ಮಾಡಿಸುವುದು, ಹುಂಡಿಗಳಲ್ಲಿ ಕಾಣಿಕೆ ಹಾಕುವುದು, ನೆಲೆಸಿದ ಗಿರಿಗೆ ಪಾದಯಾತ್ರೆ ಮಾಡುವುದು, ದೇವರಿಗೆ ಕಾಯಿ ಮತ್ತು ಕರ್ಪೂರ ಮಾಡಿಸುವುದು ಮುಂತಾದವುಗಳನ್ನು ಮಾಡುತ್ತಾರೆ. ಈ ರೀತಿ ಮಾನವನು ಹರಕೆಯನ್ನು ಕಟ್ಟಿಕೊಳ್ಳುವುದನ್ನು ಈಗಲೂ ಕಾಣಬಹುದು.

**ಆಚರಣೆಗಳು**

ನಾಗರಿಕ ಸಮಾಜಕ್ಕಿಂತ ಆದಿ ಮಾನವನ ಸಮಾಜದಲ್ಲಿ, ಪಟ್ಟಣಗಳಿಗಿಂತ ಹಳ್ಳಿಗಳಲ್ಲಿ, ಸುಶಿಕ್ಷಿತರಿಗಿಂತ ನಿರಕ್ಷರಿಗಳಲ್ಲಿ ಸಂಪ್ರದಾಯಗಳು ಪ್ರಬಲವಾಗಿರುತ್ತವೆ. ನಗರವಾಸಿಗಳಿಗಿಂತ ಹಳ್ಳಿಗಳಲ್ಲಿ ವಾಸಿಸುವ ಜನರಲ್ಲಿ ಸಂಪ್ರದಾಯಾಚರಣೆಗಳಲ್ಲಿ ಹೆಚ್ಚು ಸಂಕೀರ್ಣವನ್ನು ಕಾಣಬಹುದು. ಅಲ್ಲದೆ ನೀಲಗುಂದದ ಭೌಗೋಳಿಕ ಪರಿಸರ ಮತೀಯ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಆಯಾಯ ಜನರ ಮನೋಧರ್ಮವನ್ನು ಅವಲಂಬಿಸಿ ಸಂಪ್ರದಾಯಗಳು ಉಗಮಗೊಂಡಿವೆ. ಇವು ನಾನಾ ರೀತಿಯ ಸಂಪರ್ಕಗಳಿಂದಾಗಿ ಪ್ರದೇಶದಿಂದ ಪ್ರದೇಶಕ್ಕೆ ಪ್ರಚಾರಗೊಳ್ಳುತ್ತವೆ.

ಮನುಷ್ಯ ಹುಟ್ಟಿನಿಂದ ಮರಣದವರೆಗೆ ಅನೇಕ ಸಂಪ್ರದಾಯಗಳನ್ನು ಆಚರಿಸುತ್ತಾನೆ. ಈ ಸಂಪ್ರದಾಯಾಚರಣೆಗಳು ಜಾತಿಯಿಂದ ಜಾತಿಗೆ ಪಂಗಡದಿಂದ ಪಂಗಡಕ್ಕೆ ವ್ಯತ್ಯಾಸವಾಗುತ್ತಾ ಹೋಗುತ್ತವೆ. ಅಲ್ಲದೆ ಕಾಲದಿಂದ ಕಾಲಕ್ಕೆ ತನ್ನ ಆಂತರಿಕ ಕಾರಣಗಳಿಂದ ಕೆಲವು ಸಂಪ್ರದಾಯಗಳು ಬದಲಾವಣೆಗಳಾಗುತ್ತವೆ.

ಯಾವುದೇ ನಿರ್ದಿಷ್ಟ ಸಮಾಜದಲ್ಲಿ ನಡೆಯುವ ನಾಮಕರಣ, ಜವಳ, ಗಂಗೆ ಪೂಜೆ, ವಿವಾಹ, ದೇವದಾಸಿ ಇತ್ಯಾದಿ ಆಚರಣೆಗಳ ಜೊತೆಗೆ ಹುಟ್ಟಿನಿಂದ ಸಾವಿನವರೆಗೆ ಅನೇಕ ಸಂಪ್ರದಾಯಗಳನ್ನು ಆಚರಿಸುತ್ತಾ ಬಂದಿದ್ದಾರೆ. ಅವುಗಳಲ್ಲಿ ಕೆಲವು ವಿಶಿಷ್ಟವಾದ ಹಾಗೂ ಮುಖ್ಯವಾದ ಧಾರ್ಮಿಕ ವಿಧಿ-ವಿಧಾನಗಳನ್ನು ತಿಳಿಯಲು ಪ್ರಯತ್ನಿಸಲಾಗಿದೆ.

## ನಾಮಕರಣ

ಈ ಜಗತ್ತಿನಲ್ಲಿ ಜೀವಿಸಿದ ಮಾನವ ಬಹುತೇಕವಾಗಿ ವಂಶಾಭಿವೃದ್ಧಿಯನ್ನು ಬಯಸುತ್ತಾನೆ. 'ದೇವರಿದ್ದ ಗುಡಿ ಚೆಂದ, ಮಕ್ಕಳಿದ್ದ ಮನೆ ಚಂದ' ಎಂಬ ಗಾದೆಯಂತೆ ಮಕ್ಕಳಿರುವುದು ಮನೆಗೆ ಅವಶ್ಯಕತೆಯನ್ನು ಸೂಚಿಸುತ್ತದೆ. ಮಕ್ಕಳು ತನ್ನ ಮನೆತನವನ್ನು ಮುಂದುವರಿಸುವ ಜೀವ ವಾಹಿನಿ. ಒಂದು ಕುಟುಂಬದಲ್ಲಿ ಮಗು ಜನಿಸಿದರೆ ತಮ್ಮ ಜಾತಿಗೆ ಅಥವಾ ತಮ್ಮ ಧರ್ಮಕ್ಕೆ ಅನುಗುಣವಾಗಿ ಧಾರ್ಮಿಕ-ವಿಧಿ-ವಿಧಾನಗಳನ್ನು ಆಚರಿಸುತ್ತಾರೆ.

ಜನನವಾದ ಮಗುವಿಗೆ ನಾಮಕರಣವನ್ನು ವಿವಿಧ ರೀತಿಯ ನಂಬಿಕೆ ಹಾಗೂ ಧಾರ್ಮಿಕ ವಿಧಿಗಳಿಂದ ಆಚರಿಸುತ್ತಾರೆ. ಈ ಪದ್ಧತಿಯು ಕರ್ನಾಟಕದಲ್ಲಿ ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯಕ್ಕೆ. ಜಾತಿಯಿಂದ ಜಾತಿಗೆ, ಮತದಿಂದ ಮತಕ್ಕೆ ಆಚರಿಸುವ ವಿಧಾನಗಳಲ್ಲಿ ವಿಭಿನ್ನ ರೀತಿಯ ವ್ಯತ್ಯಾಸ ಕಾಣಿಸುತ್ತವೆ.

ಉದಾಹರಣೆಗೆ ಕೆಲವು (ಜಾತಿಯ) ಜನಾಂಗದಲ್ಲಿ ಮಗು ಜನಿಸಿದ ೧೦, ೧೨ನೆಯ ದಿನಗಳಲ್ಲಿ ಹೆಸರಿಡುವ ಪದ್ಧತಿ ಕಂಡುಬಂದಿದೆ. ಮುಸ್ಲಿಂ ಜನಾಂಗದಲ್ಲಿ ಜನನದ ದಿನವೇ ನಾಮಕರಣ ಪದ್ಧತಿಯು ಬೆಳೆದುಬಂದಿದೆ. ಒಟ್ಟಾರೆಯಾಗಿ ಹೇಳುವುದಾದರೆ ಮೇಲೆ ತಿಳಿಸಿದಂತೆ ಅವರ ಜಾತಿಗನುಗುಣವಾಗಿ ನಾಮಕರಣ ಮಾಡುವುದು ಕಂಡುಬರುತ್ತದೆ.

## ಸೀಮಂತ ಕಾರ್ಯ

ವಿವಾಹವಾದ ಸ್ತ್ರೀಯು ಮೊದಲ ಸಲ ಗರ್ಭಿಣಿಯಾದರೆ ಅವಳಿಗೆ ಏಳು ತಿಂಗಳಲ್ಲಿ ಅಥವಾ ಒಂಬತ್ತನೇ ತಿಂಗಳಿನ ಮೊದಲನೆ ವಾರದಲ್ಲಿ ಸೀಮಂತ ಕಾರ್ಯ ಮಾಡುತ್ತಾರೆ. ಈ ಪದ್ಧತಿಯು ಎಲ್ಲ ಜನಾಂಗದಲ್ಲಿ ನಡೆಯುತ್ತದೆ. ಈ ಆಚರಣೆ ಮಹಿಳೆಯ ಗಂಡನ ಮನೆಯಲ್ಲಿ ನಡೆಯುತ್ತದೆ. ಇದಕ್ಕೆ ನೆಂಟರು ಬಂಧು ಬಳಗದವರನ್ನು ಆಹ್ವಾನಿಸುತ್ತಾರೆ. 'ಸ್ತ್ರೀ'ಗೆ ಹಸಿರು ಬಳೆ, ಹಸಿರು ಸೀರೆ, ರವಿಕೆ ತೊಡಿಸಿ, ಸತಿ-ಪತಿಗಳನ್ನು ಒಂದು ಕಡೆಯಲ್ಲಿ ಕುಳ್ಳಿರಿಸಿ ಆರತಿಯನ್ನು ಬೆಳಗುತ್ತಾರೆ. ಈ ರೀತಿಯ ವಿಶೇಷ ಆಚರಣೆಯನ್ನು ಈ ಪರಿಸರದಲ್ಲಿ ಕಾಣಬಹುದು.

## ಗಂಗೆ ಪೂಜೆ

ಹೆಣ್ಣು ಹೆರಿಗೆಯಾದ ನಂತರ ಬಾಣಂತಿ ಕೆಲವು ದಿನಗಳ ಅವಧಿ ವಿಶ್ರಾಂತಿಯನ್ನು ತೆಗೆದುಕೊಳ್ಳುವುದು ಅವಳಿಗೂ ಹಾಗೂ ಜನಿಸಿದ ಮಗುವಿಗೂ ಆರೋಗ್ಯದ ಹಿತದೃಷ್ಟಿಯಿಂದ ಸರಿ ಎನ್ನಿಸುತ್ತದೆ. ಆ ಸಂದರ್ಭದಲ್ಲಿ ಅವಳು ಯಾವುದೇ ಮನೆಯ ಕೆಲಸವನ್ನು ಮಾಡುವಂತಿಲ್ಲ. ಈ ಸಮಯದಲ್ಲಿ ಮಕ್ಕಳಿಗೆ ಹೆಚ್ಚು ಪೋಷಣೆ ನೀಡಲು ಅನುಕೂಲವಾಗುತ್ತದೆ. ಅವಳು ವಿಶ್ರಾಂತಿ ತೆಗೆದುಕೊಳ್ಳಲು ದಿವಸಗಳ ಸಂಖ್ಯೆ ಆಯಾ ಕುಟುಂಬಗಳ ಸಾಮಾಜಿಕತೆ ಮತ್ತು ಆರ್ಥಿಕತೆಯನ್ನು ಅವಲಂಬಿಸುತ್ತದೆ. ಇವರು ಪ್ರಾರಂಭದಿಂದ ಮೂರು ತಿಂಗಳವರೆಗೂ ವಿಶ್ರಾಂತಿಯನ್ನು ಪಡೆಯಬಹುದು. ಆ ಸಂದರ್ಭದಲ್ಲಿ ಅವಳು ತಣ್ಣೀರು ಮುಟ್ಟುವಂತೆ ಇಲ್ಲ, ಬಳಸುವಂತೆಯೂ ಇಲ್ಲ. ಅಲ್ಲದೆ ಅವಳು ತಣ್ಣೀರನ್ನು ಮುಟ್ಟಬೇಕಾದರೆ ಮೊದಲು ಬಾವಿಗೋ, ಕೆರೆಗೋ, ನಲ್ಲಿಯ ನೀರಿಗೋ ಹೋಗಿ ಗಂಗೆ ಪೂಜೆ ಮಾಡಿ ಆದ ಮೇಲೆ ತಣ್ಣೀರನ್ನು ಬಳಸುತ್ತಾರೆ. ಈ ಒಂದು ಪರಂಪರೆ ಹಿಂದಿನಿಂದ ಇಲ್ಲಿಯವರೆಗೂ ಈ ಪರಿಸರದಲ್ಲಿ ಬೆಳೆದು ಬಂದಿದೆ.

## ಜವಳ ತೆಗೆಸುವುದು

ಈ ಪದ್ಧತಿಯು ಸಾಮಾನ್ಯವಾಗಿ ಎಲ್ಲ ಜನಾಂಗದಲ್ಲಿಯೂ ಪ್ರಚಲಿತದಲ್ಲಿದೆ. ಹುಟ್ಟು ಕೂದಲನ್ನು ಮೊದಲ ಸಲ ತೆಗೆಸುವಂತಹದ್ದನ್ನು ಜವಳ ತೆಗೆಸುವುದು ಎನ್ನುತ್ತಾರೆ. ಈ ಕೂದಲನ್ನು ತೆಗೆಸುವಾಗ ಕೆಲವು ವಿಧಿ-ವಿಧಾನಗಳನ್ನು ಆಚರಿಸುತ್ತಾರೆ. ಇದನ್ನು ಮಾಡುವಲ್ಲಿ ಕೆಲವು ಸಂಪ್ರದಾಯ ನಿಯಮಗಳು ಇವೆ. ಇದನ್ನು ಒಂದು ವರ್ಷ ಮುಗಿಯುವುದರೊಳಗೆ ತೆಗೆಸುತ್ತಾರೆ. ಆಯಾ ಕುಟುಂಬದ ಆರ್ಥಿಕ ಸ್ಥಿತಿಯ ಅನುಗುಣವಾಗಿ ಹಾಗೂ ಕೆಲವು ಇತರ ಕಾರಣಗಳಿಂದ ಅವಧಿಯಲ್ಲಿ ಕೂದಲು ತೆಗೆಯುವಾಗ ವ್ಯತ್ಯಾಸವಾಗುತ್ತದೆ.

ಈ ಪರಿಸರದ ಜನರು ಹುಟ್ಟುವ ಕೂದಲನ್ನು ತೆಗೆಸುವುದು ಸಾಮಾನ್ಯವಾಗಿ ಆಯಾ ಕುಟುಂಬದ ಮನೆಯ ದೇವರ ಸನ್ನಿಧಿಯಲ್ಲಿ (ಗುಡಿಯಲ್ಲಿ). ಕೆಲವರು ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಸಿ ತೀರ್ಥ ತಂದು ಹಾಕಿ, ಹುಟ್ಟು ಕೂದಲನ್ನು ತೆಗೆಯಿಸುತ್ತಾರೆ. ಅದಕ್ಕೆ ಆಯಾ ಕುಟುಂಬ ಬಂಧು ಬಳಗದವರನ್ನು ಕರೆಯಿಸುತ್ತಾರೆ. ಮೊದಲು ಸೋದರ ಮಾವಶಾಸ್ತ್ರಕ್ಕಾಗಿ ಕೂದಲು ಕತ್ತರಿಸುತ್ತಾನೆ. ನಂತರ ಆ ಕಸುಬುದಾರನಿಂದ (ಹಡಪದ ಜನಾಂಗ) ಕೂದಲು ತೆಗೆದ ಮೇಲೆ ಅವನಿಗೆ ಶಾಸ್ತ್ರದ ಅನುಸಾರವಾಗಿ ಹೊಸ ವಸ್ತು ಅಥವಾ ಬಟ್ಟೆ ಕೊಟ್ಟು ಅದರಲ್ಲಿ ತೆಂಗಿನಕಾಯಿ, ಬಾಳೇಹಣ್ಣು, ಎಲೆ, ಅಡಿಕೆ, ದಕ್ಷಿಣೆ(ಹಣ) ಇಡುತ್ತಾರೆ. ಕೂದಲು ತೆಗೆದ ನಂತರ ಆ ಮಗುವಿಗೆ ಸ್ನಾನ ಮಾಡಿಸಿ ಹೊಸಬಟ್ಟೆಯನ್ನು ತೊಡಿಸುತ್ತಾರೆ. ಈ ಪದ್ಧತಿಯಲ್ಲಿ ಆಯಾ ಜಾತಿಗೆ, ಆಯಾ ಧರ್ಮಕ್ಕೆ ಅನುಗುಣವಾದ ರೀತಿಯಲ್ಲಿ ಧಾರ್ಮಿಕ-ವಿಧಿ-ವಿಧಾನಗಳು ನಡೆಯುತ್ತದೆ ಎಂದು ಹೇಳಬಹುದು.

## ಹೆಣ್ಣು ಮೈನೆರೆದಾಗ

ಭಾರತೀಯ ಸಂಪ್ರದಾಯದ ಪ್ರಕಾರ ಹೆಣ್ಣು ಮಕ್ಕಳು ೧೨ರಿಂದ ೧೪ ವರ್ಷಗಳ ಅವಧಿಯಲ್ಲಿ ಮೈನೆರೆಯುತ್ತಾರೆ. ಇದನ್ನು ದೊಡ್ಡವಳಾದಳು, ಋತುಮತಿಯಾದಳು, ಹೊರಗಾದಳು ಇತ್ಯಾದಿಯಾಗಿ ಕರೆಯುವುದು ಇಲ್ಲಿ ಕಂಡುಬರುತ್ತದೆ. ಮಹಿಳೆಯರ ಬದುಕಿನಲ್ಲಿ ಮೈನೆರೆಯುವುದು ಒಂದು ಮುಖ್ಯ ಘಟ್ಟ. ಅವಳು ಬಾಲ್ಯಾವಸ್ಥೆಯನ್ನು ಕಳೆದು ಪ್ರೌಢಾವಸ್ಥೆಗೆ ಸೇರುವ ಒಂದು ಸಂಕೇತ. ಅಂದರೆ ಅವಳು ಪ್ರಾಯ ಹೊಂದಿ ಮದುವೆಯಾಗಲು ಯೋಗ್ಯಳು. ಈ ಹಂತದಲ್ಲಿ ಅವಳು ಸಂತಾನೋತ್ಪತ್ತಿಗೆ ಸಿದ್ಧಳಾಗಿರುತ್ತಾಳೆ. ಪುರುಷನ ಜೊತೆಗೆ ಬದುಕನ್ನು ಆರಂಭಿಸುವುದಕ್ಕೆ ಅನುಮತಿ ದೊರೆಯುತ್ತದೆ.

ನೀಲಗುಂದದ ಪರಿಸರದಲ್ಲಿ ಹುಡುಗಿ ಮೈನೆರೆದಾಗ ಅವಳನ್ನು ಸ್ನಾನದ ಮನೆಗೆ ಕರೆದುಕೊಂಡು ಹೋಗಿ ಸೋದರತ್ತೆಯಿಂದ ನೀರು ಹಾಕಿಸುತ್ತಾರೆ. ಅದೇ ರೀತಿ ಇನ್ನೂ ನಾಲ್ಕು ಜನ ಮುತ್ತೈದೆ ಸ್ತ್ರೀಯರು ನೀರು ಹಾಕುತ್ತಾರೆ. ಹೀಗೆ ಇದು ಮೂರು ದಿನಗಳ ಕಾಲ ನಡೆಯುತ್ತದೆ. ಈ ಸಂದರ್ಭದಲ್ಲಿ ಅವಳಿಗೆ ಕೆಲವು ನಿರ್ಬಂಧಗಳನ್ನು ವಿಧಿಸುತ್ತಾರೆ. ಮೈನೆರೆದ ಹುಡುಗಿ ದೇವರ ಮನೆಗೆ, ಅಡಿಗೆ ಮನೆಗೆ, ಹೋಗುವಂತಿಲ್ಲ. ೯ ಅಥವಾ ೧೧ನೇ ದಿನಗಳಲ್ಲಿ ಗಂಗೆಯ ಪೂಜೆ ಮಾಡಿಸಿ ಈ ನಿರ್ಬಂಧ ತೆಗೆಯುವುದು ಕಂಡುಬರುತ್ತದೆ.

## ದೇವದಾಸಿ ಪದ್ಧತಿ

ಈ ಪದ್ಧತಿಯು ನೀಲಗುಂದ ಪರಿಸರದಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಕೆಳಜನಾಂಗದ ವ್ಯಕ್ತಿಗಳು ಯಾವುದೇ ತೊಂದರೆಗೆ ಸಿಲುಕಿದಾಗ ದೇವರಿಗೆ ಹರಕೆಯನ್ನು ಕಟ್ಟುವುದು ಸಹಜ. ಮಕ್ಕಳು ಆಗದೇ ಇರುವಾಗ ಅಥವಾ ಮಕ್ಕಳಿಗೆ ಆರೋಗ್ಯ ಸರಿಯಿಲ್ಲದಾಗ ಯಾವುದೇ ಅಪತ್ತು ಒದಗಿದಾಗ ಅಂಥ ಸಂದರ್ಭದಲ್ಲಿ ದೇವರಿಗೆ ಹರಕೆ ಕಟ್ಟಿಕೊಂಡು ದೇವರ ಹೆಸರಿನಲ್ಲಿ ಮುತ್ತು ಕಟ್ಟಿಸಿ ಸ್ತ್ರೀಯರನ್ನು ಬಿಡುತ್ತಾರೆ. ಅದಕ್ಕೆ ದೇವದಾಸಿ ಪದ್ಧತಿ ಎಂದು ಕರೆಯುತ್ತಾರೆ. ಈ ಸಂಪ್ರದಾಯಗಳು ಕೆಳ ಜನಾಂಗದಲ್ಲಿ ಕಂಡುಬರುತ್ತದೆ. ಈ ಧಾರ್ಮಿಕ ಪದ್ಧತಿಯು ಈಗ ನೂರಕ್ಕೆ ತೊಂಬತ್ತರಷ್ಟು ನಾಶವಾಗಿದ್ದು, ಶೇಕಡ ಹತ್ತರಷ್ಟು ಮಾತ್ರ ಈ ಪರಿಸರದಲ್ಲಿ ಇರುವುದು ಕಂಡುಬರುತ್ತದೆ.

## ವಿವಾಹ

ವಿಶ್ವದ ಎಲ್ಲ ಮಾನವ ಜನಾಂಗಗಳಲ್ಲಿಯೂ ರೂಢಿಯಲ್ಲಿರುವ ವೈವಾಹಿಕ ವ್ಯವಸ್ಥೆ ಆಚರಣೆಗೆ ಬರುವ ಮುನ್ನ ಮಾನವನು ಲೈಂಗಿಕ ಸಂಬಂಧವಾಗಿ ಪ್ರಾಣಿಗಳಂತೆ ವರ್ತಿಸುತ್ತಿದ್ದ ಎಂಬುವುದರಲ್ಲಿ ಎರಡು ಮಾತಿಲ್ಲ. ವ್ಯಕ್ತಿ-ವ್ಯಕ್ತಿಗಳ ನಡುವೆ ಮಧುರ ಬಾಂಧವ್ಯ ಕುದುರಬೇಕಾದರೆ, ಪೈಶಾಚಿಕತೆ ನಾಶವಾಗಿ ಸಮಾಜದಲ್ಲಿ ಸೌಹಾರ್ದತೆ, ಶಾಂತಿ, ಸ್ನೇಹಮಯ ವಾತಾವರಣ ಉಂಟಾಗಬೇಕಾದರೆ ಈ ಪದ್ಧತಿ ಅತ್ಯುತ್ತಮ ಹಾಗೂ ಅನಿವಾರ್ಯವಾಗಿತ್ತು.

ಒಂದು ನಿರ್ದಿಷ್ಟ ಸಮಾಜದಲ್ಲಿ ನಡೆಯುವ ಮದುವೆ ಆಚರಣೆಯು ಆ ಸಮಾಜದ ಸಂಸ್ಕೃತಿಯ ಪ್ರತಿಬಿಂಬವಿದ್ದಂತೆ. ಮದುವೆ ಎಂಬುದು ಸಮಾಜದ ಬಹುಮುಖ್ಯ ಸಾಂಸ್ಕೃತಿಕ ಕ್ರಿಯೆ. ಇದರಲ್ಲಿ ಬಂಧು ಬಳಗದವರು ಸ್ನೇಹಿತರು ಒಂದು ಕಡೆ ಸೇರುವುದರಿಂದ ವ್ಯಕ್ತಿ-ವ್ಯಕ್ತಿಗಳ ನಡುವೆ ನಿಕಟವಾದ ಸಂಬಂಧ ಹೆಚ್ಚುತ್ತದೆ. ವಿವಾಹ ಎನ್ನುವುದು ಜಾತಿ, ಧರ್ಮ, ಆಯಾ ಜನಾಂಗದ ಪದ್ಧತಿಗೆ ಅನುಗುಣವಾಗಿ ನಡೆಯುತ್ತದೆ.

ವಿವಾಹ ಸಂಬಂಧ ಬೆಳೆಸುವ ಮೊದಲು ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಹೋಗಿ ಕನ್ಯೆಯನ್ನು ನೋಡಿಕೊಂಡು ಬರುತ್ತಾರೆ. ನಂತರ ಹೆಣ್ಣಿನ ಕಡೆಯವರು ಗಂಡಿನ ಮನೆಗೆ ಬಂದು ಹೋಗುತ್ತಾರೆ. ಇಬ್ಬರ ಸಂಬಂಧ ಒಪ್ಪಿಗೆಯಾದರೆ ನಿಶ್ಚಿತಾರ್ಥಕ್ಕೆ ಹೆಣ್ಣಿನ ಮನೆಗೆ ಹೋಗುವುದು ಒಂದು ಸಂಪ್ರದಾಯ. ಇಬ್ಬರಲ್ಲೂ ಕೊಡುವುದು ಮತ್ತು ತೆಗೆದುಕೊಳ್ಳುವುದು ಮುಗಿದ ನಂತರ ಅಲ್ಲಿಯೇ ಗಂಡಿನ ಕಡೆಯವರು ಮತ್ತು ಹೆಣ್ಣಿನ ಕಡೆಯವರು ತಾಂಬೂಲವನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆ. ಆ ಕಾರ್ಯಕ್ರಮಕ್ಕೆ ಭಾಗವಹಿಸಿದ ಎಲ್ಲರಿಗೂ ತಾಂಬೂಲವನ್ನು ಹಂಚುತ್ತಾರೆ.

ಕೆಲವು ಜನಾಂಗದಲ್ಲಿ ಅದೇ ದಿನ ವಿವಾಹ ನಿಶ್ಚಿತವಾಗುತ್ತದೆ. ಕೆಲವು ಜನಾಂಗದಲ್ಲಿ ಕೆಲವು ದಿನಗಳ ನಂತರ ಈ ವಿಷಯದ ಬಗ್ಗೆ ಚರ್ಚಿಸುತ್ತಾರೆ. ಈ ವಿವಾಹವನ್ನು ನೆರವೇರಿಸುವುದು ಸಾಮಾನ್ಯವಾಗಿ ಫಾಲ್ಗುಣ, ಜೇಷ್ಠ, ಶ್ರಾವಣ ಮಾಸಗಳಲ್ಲಿ ವಿವಾಹವನ್ನು ಕೆಲವರು ದೇವಸ್ಥಾನದಲ್ಲಿ ನಡೆಸಿದರೆ ಮತ್ತೆ ಕೆಲವರು ತಮ್ಮ ಮನೆಯ ಮುಂದೆ ಮಾಡುತ್ತಾರೆ.

ನೀಲಗುಂದ ಪರಿಸರದಲ್ಲಿ ತಾಳಿ ಕಟ್ಟುವ ಎರಡು ದಿನಗಳ ಮುಂಚಿತವಾಗಿ ಬಾಗಿಲ ಮುಂದೆ ಚಪ್ಪರ ಹಾಕುತ್ತಾರೆ. ಅಂದು ಹಿರಿಯರ ಪೂಜೆಯನ್ನು ಸಾಯಂಕಾಲ ಮಾಡುತ್ತಾರೆ. ಎರಡನೇ ದಿನ ಊರಿನ ಜನವರಿಗೆ ಊಟವನ್ನು ನೀಡುತ್ತಾರೆ. ಅಂದು ಊರಿನ ಬಣಕಾರನು ತೋಟಕ್ಕೆ ಹೋಗಿ ಹತ್ತಿಯ ಕೊಂಬೆಯನ್ನು ಕಡೆದುಕೊಂಡು ಬಂದು ವಿವಾಹವಾಗುವ ಮನೆಯ ಬಾಗಿಲ ಬಲಭಾಗದಲ್ಲಿ ಇಡುತ್ತಾನೆ. ಅಂದು ಮದುಮಗಳಿಗೆ ಮತ್ತು ಮದುಮಗನಿಗೆ ಅರಶಿಣವನ್ನು ಗುರುಗಳ ಮನೆಯಲ್ಲಿ ಇಲ್ಲವೆ ಪುರೋಹಿತರ ಮನೆಯಲ್ಲಿ ನೆರವೇರಿಸಿಕೊಂಡು ಬರುತ್ತಾರೆ.

ಅಂದೇ ವಿವಾಹ ನಡೆಯುವ ಸ್ಥಳಕ್ಕೆ ತೆರಳಿ ಅಲ್ಲಿ ನೆಲೆಸುತ್ತಾರೆ. ಬೆಳಗಿನ ಜಾವ ಇಬ್ಬರನ್ನು ಆಯಾ ಮನೆಯ ಪದ್ಧತಿಗೆ ಅನುಗುಣವಾಗಿ ಸ್ನಾನ ಮಾಡಿಸುತ್ತಾರೆ. ಹುಡುಗನಿಗೆ ಹೊಸ ಬಟ್ಟೆ ತೊಡಿಸುತ್ತಾರೆ. ಬಿಳಿಯ ಅಂಗಿ, ಕಂಚಿ ಪಂಚೆ, ತಲೆಗೆ ಪೇಟ, ಕೈಯಲ್ಲಿ ನಿಂಬೆಹಣ್ಣು, ಒಂದು ಕಾಯಿಯನ್ನು ಕೊಡುತ್ತಾರೆ. ಇವು ಗಂಡಿನ ವೇಷ ಭೂಷಣಗಳಾಗಿವೆ.

ಹೆಣ್ಣಿಗೆ ಸ್ನಾನ ಮಾಡಿಸಿ ಸೀರೆ ಉಡಿಸಿ, ದಂಡೆ ಹಾಕಿ, ಉಡಿ ತುಂಬಿಸಿ ಇಬ್ಬರನ್ನು ಜೊತೆಯಲ್ಲಿ ಕುಳ್ಳಿರಿಸಿ, ಕೈಗೆ ಕಂಕಣಕಟ್ಟಿ ಗೃಹಸ್ಥ ಸ್ವಾಮಿಗಳು ಶಾಸ್ತ್ರದ ಮಂತ್ರಗಳನ್ನು ಹೇಳಿ ಇತರ ಸಂಪ್ರದಾಯಗಳು

ಮುಗಿದ ನಂತರ ತಾಳಿಯನ್ನು ಕಟ್ಟಿಸುತ್ತಾರೆ. ನಂತರ ಗೃಹಸ್ಥ ಸ್ವಾಮಿಗಳು ಇಬ್ಬರಿಗೆ ಕೆಲವು ಪ್ರತಿಜ್ಞೆಯನ್ನು ಮಾಡಿಸುತ್ತಾರೆ. ಹೀಗೆ ಆಯಾ ಜಾತಿಗೆ ಅನುಗುಣವಾಗಿ ವಿವಾಹವಾಗುವುದನ್ನು ಈ ನೀಲಗುಂದ ಪರಿಸರದಲ್ಲಿ ನೋಡಬಹುದು. ಕುರುಬ, ವಾಲ್ಮೀಕಿ, ಮುಸ್ಲಿಂ, ಭೋವಿ ಇತ್ಯಾದಿ ಜನಾಂಗದ ವಿವಿಧ ರೀತಿಯ ಸಂಪ್ರದಾಯದಂತೆ ವಿವಾಹವನ್ನು ನೆರವೇರಿಸುತ್ತಾರೆ.

## ಅಂತ್ಯ ಸಂಸ್ಕಾರ

ಮಾನವನ ಬದುಕಿನಲ್ಲಿ ಹುಟ್ಟು ಮತ್ತು ಸಾವು ಪ್ರಮುಖ ಘಟ್ಟಗಳು. ಗಾದೆ ಮಾತಿನಂತೆ ಹುಟ್ಟುವುದು ನಿಶ್ಚಿತ ಸಾಯುವುದು ಖಚಿತ'' ಎಂಬಂತೆ ಭೂಮಿಯ ಮೇಲೆ ಜನಿಸಿದ ಮೇಲೆ ಸಾಯಲೇ ಬೇಕು ಅದು ಪ್ರಕೃತಿಯ ನಿಯಮ. ಜನನ ಮರಣ ಒಂದೇ ನಾಣ್ಯದ ಎರಡು ಮುಖಗಳು.

ಈ ಪರಿಸರದಲ್ಲಿ ಶವಸಂಸ್ಕಾರವನ್ನು ಎರಡು ರೀತಿಯಲ್ಲಿ ನಡೆಸುತ್ತಾರೆ. ೧. ಸಮಾಧಿ ಮಾಡುವ ಪದ್ಧತಿ (ಹೂಳುವುದು) ೨. ಸುಡುವ ಪದ್ಧತಿ (ಚಿತೆಯನ್ನು ಹಚ್ಚುವುದು). ಮಾನವ ಮರಣ ಹೊಂದಿದಾಗಿನಿಂದ ಹಿಡಿದು ಅಂತ್ಯಕ್ರಿಯೆಯಾಗುವವರೆಗೂ ಅನೇಕ ರೀತಿಯ ವಿಧಿ-ವಿಧಾನಗಳನ್ನು ಆಚರಿಸುತ್ತಾರೆ. ಈ ಸಂಪ್ರದಾಯ ಒಂದು ಪರಿಸರದಿಂದ ಮತ್ತೊಂದು ಪರಿಸರಕ್ಕೆ ಭಿನ್ನವಾಗಿರುತ್ತದೆ. ಜಾತಿಯಿಂದ ಜಾತಿಗೆ ಬುಡಕಟ್ಟಿನಿಂದ ಬುಡಕಟ್ಟಿಗೆ ಅಂತ್ಯಕ್ರಿಯೆ ಮಾಡುವುದು ಬೇರೆಯಾಗಿರುತ್ತದೆ. ಸಮಾಧಿ ಮಾಡುವುದು ಬ್ರಾಹ್ಮಣ ಜನಾಂಗವನ್ನು ಬಿಟ್ಟರೆ ಉಳಿದ ಎಲ್ಲ ಜನಾಂಗದಲ್ಲಿ ಬಾಲಕರು, ಹಿರಿಯರು, ರೋಗದಿಂದ ನರಳಿದವರು ಅಕಾಲಿಕ ದುರ್ಮರಣ ಹೊಂದಿದವರನ್ನು ಸಮಾಧಿ ಮಾಡುವುದು ಹಿಂದಿನಿಂದಲೂ ಈಗಿನವರೆಗೆ ಪ್ರಚಲಿತದಲ್ಲಿದೆ. ಗರ್ಭಿಣಿ ಸ್ತ್ರೀಯರು, ಬಾಣಂತಿಯರು, ತೊನ್ನಿನವರು ಮತ್ತು ವಿಷವನ್ನು ಕುಡಿದವರು ಸತ್ತರೆ ಅವರನ್ನು ಸುಡುವ ಪದ್ಧತಿ ಇದೆ. ಅಂದರೆ ಬ್ರಾಹ್ಮಣ ಜನಾಂಗದಲ್ಲಿ ಯಾರೇ ಮರಣ ಹೊಂದಿದೂ ಸುಡುವ ಪದ್ಧತಿ ಕಂಡುಬರುತ್ತದೆ. ಆಯಾ ಧರ್ಮಕ್ಕೆ ಅನುಗುಣವಾಗಿ ಆಚರಣೆಗೆ ಅನುಗುಣವಾಗಿ ರುದ್ರಭೂಮಿಯಲ್ಲಿ ಅಂತ್ಯಕ್ರಿಯೆ ನಡೆಯುತ್ತದೆ.

## ಇತರೆ ಸಂಪ್ರದಾಯ

ನೀಲಗುಂದ ಗ್ರಾಮದಲ್ಲಿ ಮಳೆಯು ಬರದೆ ಇದ್ದಾಗ ಎಲ್ಲ ಜನಾಂಗದವರು ಚರ್ಚಿಸಿ, 'ಪರ್ವ' ಮಾಡಲು ತೀರ್ಮಾನ ಮಾಡುತ್ತಾರೆ. ಇಲ್ಲಿ ಪ್ರಮುಖ ದೇವರುಗಳಾದ ವೀರಭದ್ರೇಶ್ವರ, ತಿಮ್ಮಪ್ಪ, ಭೀಮೇಶ್ವರ ಈ ಮೂರ್ತಿಗಳನ್ನು ಒಂದೊಂದು ಪಲ್ಲಕ್ಕಿಯಲ್ಲಿ ಇಟ್ಟುಕೊಂಡು ಎಲ್ಲ ಭಕ್ತಾದಿಗಳು ಕಲ್ಲಹಳ್ಳಿ ಹತ್ತಿರವಿರುವ ಮಳಿಮಲ್ಲಪ್ಪನ ಸ್ಥಳಕ್ಕೆ ಹೋಗಿ ಅಲ್ಲಿ ಆ ಮೂರ್ತಿಗೆ ಅಭಿಷೇಕ ಹಾಗೂ ಪೂಜೆ, ಪುನಸ್ಕಾರ ಮಾಡಿಕೊಂಡು ನೀಲಗುಂದದ ಭೀಮೇಶ್ವರ ದೇವಾಲಯದಲ್ಲಿ ಮೂರ್ತಿಗಳನ್ನು ಇಟ್ಟು ಸಪ್ತ ಭಜನೆಯನ್ನು ಮಾಡುತ್ತಾರೆ. ಜನಾಂಗೀಯ ಭೇದ-ಭಾವವಿಲ್ಲದೆ ಒಟ್ಟಿಗೆ ಸೇರಿ ದಾಸೋಹವನ್ನು

ಮಾಡಿ ಎಲ್ಲರೂ ಊಟ ಮಾಡಿಬರುವ ಪದ್ಧತಿ ಬೆಳೆದುಬಂದಿದೆ. ಇದರಿಂದ ಮಳೆ ಬರುತ್ತದೆ ಎಂಬ ನಂಬಿಕೆ ಇದೆ.

ಕುಂಚೂರು ಗ್ರಾಮದ ಎಲ್ಲ ಜನಾಂಗದವರು ಮಳೆ ಬರದೆ ಇದ್ದಾಗ, ಚರ್ಚಿಸಿ ಬೆಟ್ಟದ ಮಲ್ಲಯ್ಯ ಗುಡ್ಡಕ್ಕೆ ತಮ್ಮ ತಮ್ಮ ಮನೆಗಳಲ್ಲಿ ವಿವಿಧ ಅಡುಗೆಯನ್ನು ಮಾಡಿಕೊಂಡು ಹೋಗಿ ದೇವರಿಗೆ ಅಭಿಷೇಕ ಹಾಗೂ ಪೂಜೆ ಮಾಡಿಸಿ, ಪುಷ್ಪವನ್ನು ಕೇಳುತ್ತಾರೆ. ನಂತರ ಎಲ್ಲರು ಒಂದು ಕಡೆ ಕುಳಿತುಕೊಂಡು ಊಟ ಮಾಡಿ ಬರುವ ಸಂಪ್ರದಾಯ ಹಿಂದಿನಿಂದಲೂ ಪ್ರಚಲಿತದಲ್ಲಿದೆ.

ಚಿರಸ್ತಹಳ್ಳಿ ಜನತೆಯು ಮಳೆಗಾಲದಲ್ಲಿ ಮಳೆಯು ಬರದೇ ಇದ್ದಾಗ ಗ್ರಾಮಸ್ಥರು ಸೇರಿಕೊಂಡು ಮಳೆ ಮಲ್ಲಪ್ಪನನ್ನು ಕರೆಯಲು ತೀರ್ಮಾನಿಸುತ್ತಾರೆ. ಅಂದು ಎಲ್ಲ ಜಾತಿಯವರು ತಮ್ಮ ಮನೆಯಲ್ಲಿ ವಿಶೇಷ ಅಡುಗೆಯನ್ನು ತಯಾರಿಸಿಕೊಂಡು ಊರಿನಿಂದ ಮೂರು ಕಿ.ಮೀ.ದೂರದಲ್ಲಿರುವ ಮಾಚಿಹಳ್ಳಿ ಗುಡ್ಡಕ್ಕೆ ಹೋಗುತ್ತಾರೆ. ಅವರಲ್ಲಿ ಜಂಗಮ, ಗೌಡ, ಬಣಕಾರ, ದಾಸಪ್ಪ, ಅರ್ಚಕ, ಕುರುಬ ಹಾಗೂ ವಾಲ್ಮೀಕಿ ಈ ಜಾತಿಗೆ ಸೇರಿದ ಕುಟುಂಬದ ಒಬ್ಬ ಸದಸ್ಯರಂತೆ ಆ ದಿನ ಊಟ ಮಾಡುವಂತಿಲ್ಲ. ಆ ಸ್ಥಳಕ್ಕೆ ಹೋಗುವವರು ಯಾರೂ ಪಾದರಕ್ಷೆಯನ್ನು ಹಾಕುವಂತಿಲ್ಲ. ಅಂದು ಪಲ್ಲಕ್ಕಿಯಲ್ಲಿ ಆಂಜನೇಯ ಮೂರ್ತಿಯನ್ನು ಇಟ್ಟುಕೊಂಡು ಮಾಚಿಹಳ್ಳಿ ಹತ್ತಿರ ಇರುವ ಗುಡ್ಡಕ್ಕೆ ಹೋಗುತ್ತಾರೆ. ಅಲ್ಲಿಗೆ ಹೋದವರಲ್ಲಿ ಊಟ ಮಾಡದೆ ಇರುವ ವ್ಯಕ್ತಿಗಳಿಗೆ ಹಾಲು, ಬಾಳೆಹಣ್ಣು, ಲಘು ಉಪಹಾರ ಕೊಡುತ್ತಾರೆ. ಅಲ್ಲಿಯ ಒಬ್ಬ ಜಂಗಮನನ್ನು ಸ್ನಾನ ಮಾಡಿಸಿ ಗುಡ್ಡದಲ್ಲಿರುವ ಆಂಜನೇಯ ಮೂರ್ತಿ ಹಾಗೂ ಪಲ್ಲಕ್ಕಿಯಲ್ಲಿ ತೆಗೆದುಕೊಂಡು ಹೋದ ಮೂರ್ತಿಗೆ ಅಭಿಷೇಕ ಹಾಗೂ ಪೂಜೆ ಪುನಸ್ಕಾರ ಮಾಡುತ್ತಾರೆ. ತಾವು ತೆಗೆದುಕೊಂಡು ಹೋಗಿರುವ ಊಟವನ್ನು ಎಲ್ಲರೂ ಹಂಚಿಕೊಂಡು ಊಟ ಮಾಡುತ್ತಾರೆ. ಸಾಯಂಕಾಲ ಕುರುಬರ ವ್ಯಕ್ತಿಯೊಬ್ಬನು ಸಂಪ್ರದಾಯದಂತೆ ಉತ್ತರ ಅಭಿಮುಖವಾಗಿ ನಿಂತುಕೊಂಡು ತನ್ನ ಎರಡು ಕೈಗಳಿಂದ ಕಂಬಳಿಯನ್ನು ಹಿಡಿದುಕೊಂಡು "ಕಪ್ಪತ್ತು ಮಲ್ಲಯ್ಯ ವಪ್ಪತ್ತಿನಿಂದ ನಮ್ಮ ವಿಪತ್ತು ಬಿಡಿಸು ಮಳೆರಾಯ" ಎಂದು ಕಂಬಳಿ ಮೂರು ಸಾರಿ ಬೀಸಿ ಮಳೆರಾಯನನ್ನು ಕರೆಯುತ್ತಾನೆ.

ಗುಡ್ಡದಿಂದ ಮರಳಿ ಊರಿಗೆ ಬಂದ ನಂತರ ಉಳಿದ ಆಹಾರವನ್ನು ಒಂದು ಕಡೆ ಸೇರಿಸಿ ಊರಿನ ಸುತ್ತ ಪಲ್ಲಕ್ಕಿ ಹೋದಾಗ ಆಹಾರವನ್ನು ಹೆರಚ್ಚು(ಚರುಗ) ಒಗೆಯುತ್ತಾರೆ. ಇದರಿಂದ ಮಳೆ ಬರುತ್ತೆಂಬ ನಂಬಿಕೆ ಈಗಲೂ ಪ್ರಚಲಿತದಲ್ಲಿದೆ.

## ೫.೪. ಜಾತ್ರೆಗಳು

'ಯಾನೇನತ್ರಾಯತೇ ಇತಿಯಾತ್ರಾ" ಅಂದರೆ ಪುಣ್ಯಕ್ಷೇತ್ರದ ದರ್ಶನಕ್ಕೆ ಹೋಗುವವರ ರಕ್ಷೆಯೇ ಯಾತ್ರೆಯಾಗಿದೆ. ಈ ಯಾತ್ರೆ ಶಬ್ದದ ತದ್ಭವ ರೂಪ ಜಾತ್ರೆ. ಜನ ಪ್ರಾಚೀನ ಕಾಲದಿಂದಲೂ

ನಂಬಿಕೊಂಡು ಬಂದಿದ್ದ ದೇವ-ದೇವತೆಗಳನ್ನು ಭಯ ಭಕ್ತಿಯಿಂದ ಸಾಮೂಹಿಕವಾಗಿ ಪೂಜಿಸಿ ಪ್ರಾರ್ಥಿಸುವ ಸಂಭ್ರಮದ ಜನ ಸಮೂಹವೇ 'ಜಾತ್ರೆ' ಎನ್ನಿಸಿಕೊಂಡಿದೆ. ಸಮಾಜದೊಂದಿಗೆ ಒಂದಾಗಿ ಬದುಕನ್ನು ಸಾಗಿಸುತ್ತ ಬಂದಿರುವ ಮಾನವನ ವೈಯಕ್ತಿಕ ಮತ್ತು ಸಾಂಘಿಕ ಜೀವನದ ಹಿತರಕ್ಷಣೆಗಾಗಿಯೂ ಮೂಕಪ್ರಾಣಿಗಳ ಸುಖಕ್ಕಾಗಿಯೂ ರೋಗ-ರುಜಿನಗಳು ಬಾರದಂತೆ, ಮಳೆ-ಬೆಳೆ ಸರಿಯಾಗಿ ಬರುವಂತೆ ಪ್ರಾರ್ಥಿಸುವ ಉದ್ದೇಶ ಈ ಜಾತ್ರೆಯದಾಗಿದ್ದು, ಅದಕ್ಕೆ ಮುಂಚಿತವಾಗಿಯೇ ಹರಕೆ ಹೊತ್ತುದನ್ನು ಕಾರ್ಯರೂಪದಲ್ಲಿ ತರುವ ಆಚರಣೆಯೇ ಜಾತ್ರೆಯಾಗಿದೆ.[೯]

ಜಾತ್ರೆಗಳು ಎಲ್ಲ ದೇಶದ ಜನಾಂಗದವರಲ್ಲೂ ನಡೆದುಕೊಂಡು ಬಂದಿದೆ. ಮಧ್ಯ ಕರ್ನಾಟಕದ ಜಾತ್ರೆಗಳು ತಮ್ಮದೇ ಆದ ಪ್ರಾದೇಶಿಕ ವೈಶಿಷ್ಟ್ಯದಿಂದ ಕೂಡಿವೆ. ಈ ಪ್ರದೇಶದ ಜನರ ಆಚಾರ-ವಿಚಾರ, ಉದ್ಯೋಗ ಮೊದಲಾದ ಜೀವನ ಕ್ರಮ ಹೆಚ್ಚು ಕಡಿಮೆ ಒಂದೇ ಬಗೆಯಾಗಿರುತ್ತದೆ. ಉಳಿದೆಡೆಗಳಂತೆಯೇ ಈ ನೀಲಗುಂದ ಪರಿಸರದಲ್ಲಿ ಗ್ರಾಮೀಣ ದೇವತೆಗಳ ಹಾಗೂ ಶಿಷ್ಟ ದೇವತೆಗಳ ಪೂಜೆ, ಪುನಸ್ಕಾರಗಳು ಜಾತ್ರೆಗಳಲ್ಲಿ ನಡೆಯುತ್ತವೆ.[೧೦]

ತಾವು ನಂಬಿಕೊಂಡು ಬಂದಿರುವ ದೇವ-ದೇವತೆಗಳ ಹೆಸರಿನಲ್ಲಿ ಗುಡಿ-ಗುಂಡಾರಗಳನ್ನು ಕಟ್ಟಿಸಿವರುಷಕ್ಕೊಮ್ಮೆ ಇಲ್ಲವೆ ತಮಗೆ ಅನುಕೂಲವಾದಾಗ ಜಾತ್ರೆ ನೆರವೇರಿಸುವರು. ಗ್ರಾಮಗಳಲ್ಲಿ ನಗರಗಳಲ್ಲಿ ಇಂಥ ಗುಡಿ-ಗುಂಡಾರಗಳನ್ನು ಈಗಲೂ ಕಾಣಬಹುದು. ಮಳೆಗಾಲ ಮತ್ತು ಸುಗ್ಗಿಕಾಲದಲ್ಲಿ ಹೊರತುಪಡಿಸಿ ಉಳಿದ ಅವಧಿಯಲ್ಲಿ ಜಾತ್ರೆಗಳನ್ನು ನೆರವೇರಿಸುವ ಒಂದು ಸಂಪ್ರದಾಯವಿದೆ. ದೇವ-ದೇವತೆಗಳನ್ನು ಪಲ್ಲಕ್ಕಿಯಲ್ಲಿ ಅಥವಾ ರಥದಲ್ಲಿ ಕೂರಿಸಿ ಜಾತ್ರೆ ಮಾಡುವ ಪರಿಪಾಠ ಬೆಳೆದುಬಂದಿದೆ. ಪ್ರಭಾವಿ ದೇವರುಗಳ ಜಾತ್ರೆಗಳನ್ನು ಮಾಡಲು ಹಣ ಹೆಚ್ಚು ಸಂದಾಯವಾಗುತ್ತ ಬಂದಿರುವುದರಿಂದ ಇವು ತೇರಿನ ಜಾತ್ರೆಗಳಾಗಿ ನೆರವೇರುತ್ತಾ ಬಂದಿರುತ್ತವೆ.

## ಜಾತ್ರೆಯ ಪೂರ್ವಭಾವಿ ತಯಾರಿ

ಈ ಪರಿಸರದಲ್ಲಿ ಜಾತ್ರೆಗಳನ್ನು ಮಾಡುವ ಮೊದಲು ಪೂರ್ವ ತಯಾರಿಯನ್ನು ನಡೆಸುತ್ತಾರೆ. ಕೆಲವು ಜಾತ್ರೆಗಳು ಒಂದು ನಿರ್ದಿಷ್ಟವಾದ ಕಾಲದಂದು ನಡೆಯುವುದಿಲ್ಲ. ಈ ಪರಿಸರದಲ್ಲಿ ಮಳೆ ಬೆಳೆಯು ಚೆನ್ನಾಗಿ ಆದ ವರ್ಷದ ಕೊನೆಯಲ್ಲಿ ಒಂದು ದಿವಸ ಊರಿನ ಪ್ರಮುಖರು ಸೇರಿಸಿ ನಿಶ್ಚಯ ಮಾಡಿ ಆ ಗ್ರಾಮದಲ್ಲಿ ವಾಸಿಸುವ ಎಲ್ಲ ಜನಾಂಗದ ಮನೆಗೆ ಒಬ್ಬರಂತೆ ಹಿರಿಯರು ಸೇರುತ್ತಾರೆ. ದೇವಿಯ ಜಾತ್ರೆಯನ್ನು ಯಾವ ರೀತಿಯಲ್ಲಿ ಮಾಡಬೇಕು? ಕಾರ್ಯಕ್ರಮಗಳನ್ನು ಹೇಗೆ ಮಾಡಬೇಕು? ಯಾರ್‍ಯಾರು ಮಾಡಬೇಕು? ಈ ಜಾತ್ರೆಯ ಸ್ವರೂಪ ಹೇಗಿರಬೇಕು? ಇತ್ಯಾದಿಗಳನ್ನು ಚರ್ಚಿಸುವುದರೊಂದಿಗೆ ಜಾತ್ರೆಯನ್ನು ಮಾಡಲು ತೀರ್ಮಾನಿಸುತ್ತಾರೆ. ಈ ವಿಷಯವು ಅಂತಿಮ ತೀರ್ಮಾನವಾದ ಕೂಡಲೇ ಆ ಗ್ರಾಮದ ಹರಿಜನರಲ್ಲಿ ಒಬ್ಬ ಹಲಗೆಯನ್ನು ಬಾರಿಸುವುದರ ಮುಲಕ ಸಾರುತ್ತ ಈ ಜಾತ್ರೆ ಮುಗಿದ

ಕೆಲವು ದಿನಗಳ ನಂತರ ಮುಂದಿನ ಜಾತ್ರೆಗಳಲ್ಲಿ ಬಲಿ ಕೊಡುವುದಕ್ಕೆಂದು ಒಂದು ಕೋಣವನ್ನು ತಂದು ದೇವರ ಗುಡಿಯ ಮುಂದೆ ಪೂಜೆ ಮಾಡಿ ಗುಡಿಯ ಮೂರು ಸುತ್ತ ಪ್ರದರ್ಶನ ಮಾಡಿಸಿ ಕೋಣವನ್ನು ಬಿಡುತ್ತಾರೆ. ಇದಕ್ಕೆ ಈ ಪರಿಸರದ ಜನರು ಕೋಣ ಬಿಡುವುದೆಂದು ಕರೆಯುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಪರಿಸರದಲ್ಲಿ ಬರುವ ಗ್ರಾಮಗಳಾದ ಚಿರಸ್ತಹಳ್ಳಿ ಹೊನ್ನಮ್ಮ, ಕುಂಚೂರು ಬನಶಂಕರಿ ಮತ್ತು ಊರಮ್ಮ, ನೀಲಗುಂದ ಊರಮ್ಮ, ಹಲುವಾಗಲು ಊರಮ್ಮ, ಈ ಗ್ರಾಮದ ಸ್ತ್ರೀದೇವತೆಯ ಜಾತ್ರೆಯನ್ನು ಒಂದೇ ಸಂಪ್ರದಾಯ ಆಚರಣೆಯಲ್ಲಿ ಜರುಗುತ್ತ ಬಂದಿದೆ.

## ನೀಲಗುಂದ

ಈ ಗ್ರಾಮದಲ್ಲಿ ಕಂಡುಬರುವ ವಿಶೇಷವಾದ ಜಾತ್ರೆಯೆಂದರೆ ಹಂಪಿ ಹುಣ್ಣಿಮೆಯ ದಿನದಂದು ನಡೆಯುವ ವೀರಭದ್ರೇಶ್ವರ ಮತ್ತು ಗುಡ್ಡ ತಿಮ್ಮಪ್ಪನ ರಥೋತ್ಸವ. ಈ ಜಾತ್ರೆಗೆ ಪರಿಸರದಲ್ಲಿ ಬರುವ ಹಲವಾರು ಗ್ರಾಮಗಳಾದ ಇಟ್ಟಗುಡಿ, ಬೇನಹಳ್ಳಿ, ಕಲ್ಲಹಳ್ಳಿ, ಮಚ್ಚಿಗೇರಿ, ಕಲ್ಲು ಮಚ್ಚಿಗೇರಿ, ಹಂಪಾಪುರ, ಆನಂತನಹಳ್ಳಿ, ಬೈರಾಪುರ, ಮಾಚಿಹಳ್ಳಿ, ದಾದಪುರ, ಚಿರಸ್ತಹಳ್ಳಿ ಮುಂತಾದ ಗ್ರಾಮಗಳ ಜನರು ಹೆಚ್ಚು ಸೇರುತ್ತಾರೆ. ರಥೋತ್ಸವದ ಸಂದರ್ಭದಲ್ಲಿ ಸುಮಾರು ೫ ಗಂಟೆ ಸಮಯದಲ್ಲಿ ಎರಡು ಪಲ್ಲಕ್ಕಿಯಲ್ಲಿ ದೇವರನ್ನು ವಾದ್ಯ ಮೇಳಗಳೊಂದಿಗೆ ರಥದ ಕಡೆಗೆ ತೆಗೆದುಕೊಂಡು ಬರುತ್ತಾರೆ. ಅಲ್ಲಿ ಸೇರಿದ ಎಲ್ಲರ ಎದುರಿಗೆ ಇದ್ದ ಎರಡು ತೇರುಗಳಲ್ಲಿ ಒಂದು ಮೂರ್ತಿಯನ್ನು ಸುಮಾರು ೫ ಜನರಂತೆ ಹತ್ತಿ ರಥ ಎಳೆಯುತ್ತಾರೆ. ಸ್ವಾಮಿಯ ಧ್ವಜವನ್ನು ಹರಾಜು ಮಾಡುತ್ತಾರೆ. ಆ ಹರಾಜಿನಲ್ಲಿ ಗೆದ್ದ ಭಕ್ತರನ್ನು ರಥ ಏರಿಸುತ್ತಾರೆ. ನಂತರ ದೇವರ ನಾಮಾವಳಿಗಳ ಘೋಷಣೆಯೊಂದಿಗೆ ಎಲ್ಲರೂ ಸೇರಿ ರಥ ಎಳೆಯುತ್ತಾರೆ.

ಇಡೀ ಗ್ರಾಮದ ಸಮಸ್ತ ಜನರೆಲ್ಲರೂ ಆಯಾ ವೃತ್ತಿ ಪರಂಪರೆಗೆ ಅನುಗುಣವಾಗಿ ದೈವಕ್ಕೆ ತಮ್ಮ ಸೇವೆ ಮತ್ತು ಹರಕೆಗಳನ್ನು ಪೂರೈಸಿ ಆ ಸಂಪತ್ಸರದಲ್ಲಿ ಮಳೆ ಬೆಳೆ ಚೆನ್ನಾಗಿ ಬರಲಿ, ಊರಲ್ಲಿ ಯಾರಿಗೂ ಯಾವ ರೋಗವೂ ಬರದಿರಲಿ, ಇಡೀ ಊರೇ ಶಾಂತಿ ಸಮೃದ್ಧಿಯಿಂದ ಇರಲಿ ಎಂದು ಹರಕೆಯನ್ನು ಹೊರುತ್ತಾರೆ.

ಈ ಜಾತ್ರೆಗಳ ಆಚರಣೆಯ ಸಂದರ್ಭದಲ್ಲಿ ಊರಿನ ಎಲ್ಲ ದೇವಾಲಯಗಳಿಗೆ ಸುಣ್ಣ ಬಣ್ಣ ಬಳಿಯುತ್ತಾರೆ. ಜಾತ್ರೆಯು ದೊಡ್ಡದಾಗಿರುವುದರಿಂದ ಮತ್ತು ವಿಶೇಷವಾಗಿ ಆಚರಿಸುವುದರಿಂದ ಹಣದ ಅವಶ್ಯಕತೆ ಹೆಚ್ಚಾಗಿರುತ್ತದೆ. ಈ ಜಾತ್ರೆಯನ್ನು ನಡೆಸಲು ಪ್ರತಿಮನೆಯಿಂದಲೂ ಕನಿಷ್ಠ ಹಣವನ್ನು ನಿಶ್ಚಯಿಸಿ ಸಂಗ್ರಹಿಸುತ್ತಾರೆ. ಅಂದರೆ ಮನೆತನದ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ಹಣ ನೀಡಬೇಕಾಗುತ್ತದೆ. ಅಲ್ಲದೆ ಪಕ್ಕದ ಊರುಗಳಿಂದ, ದೇವಿಯ ಜಾತ್ರೆ ಬರುವ ಭಕ್ತರಿಂದ ಹಣದ ಹೊರೆಯನ್ನು ನಿವಾರಿಸಲು

ಧನವನ್ನು ಪಡೆಯುತ್ತಾರೆ. ಆ ಊರಿನ ಎಲ್ಲ ಭಕ್ತರು ಸೇರಿಕೊಂಡು ಜಾತ್ರೆ ಪ್ರಾರಂಭವಾಗುವ ಕೆಲವು ದಿನಗಳ ಮುಂಚಿತವಾಗಿ ಆ ದೇವಿಮೂರ್ತಿಗೆ ಬಣ್ಣವನ್ನು ಹಾಕಿಸುತ್ತಾರೆ. ನಂತರ ಊರಿನ ಜನರು ಆ ದೇವಿಯ ಹೆಸರಿನಲ್ಲಿ ಬಿಟ್ಟ ಕೋಣವನ್ನು(ಹುಡುಕಿ) ಹಿಡಿದು ಒಂದು ಮರಕ್ಕೆ ಕಟ್ಟುತ್ತಾರೆ. ಇದರ ಗರ್ವವನ್ನು ಕಡಿಮೆ ಮಾಡುವುದಕ್ಕೆ ಸುಣ್ಣದ ನೀರನ್ನು ಕುಡಿಸಿ ಮದವನ್ನು ಕರಗಿಸುತ್ತಾರೆ. ಈ ಕೋಣದ ವ್ಯವಸ್ಥೆಯನ್ನು ನೋಡಿಕೊಳ್ಳುವ ಜವಾಬ್ದಾರಿ ಹರಿಜನರದು.

ಶ್ರೀ ದೇವತೆಯ ಜಾತ್ರೆಯು ಸುಮಾರು ಮೂರು ದಿನಗಳವರೆಗೆ ಆಚರಣೆಯಲ್ಲಿರುತ್ತದೆ. ಈ ಜಾತ್ರೆಗಾಗಿ ಸಕಲ ಸಿದ್ಧತೆ ಮಾಡಿಕೊಂಡು ಮಂಗಳವಾರ ಗ್ರಾಮದ ದೇವತೆಗೆ ಅಲಂಕಾರದೊಂದಿಗೆ ಉಡಿಯನ್ನು ತುಂಬಿಸಿ ಜಾತ್ರೆಯನ್ನು ಪ್ರಾರಂಭಿಸುತ್ತಾರೆ. ಅದೇ ಮಂಗಳವಾರ ರಾತ್ರಿ ಕಳೆದು ಮೇಲೆ ಬುಧವಾರ ಬೆಳಗಿನ ಜಾವ ಸುಮಾರು ಮೂರು ಗಂಟೆಗೆ ದೇವರನ್ನು ಕೂರಿಸುವ ಚೌತಿಕಟ್ಟೆ-ಹತ್ತಿರ ಗ್ರಾಮದ ಯುವಕರು ಕಟ್ಟಿಹಾಕಿದ ಪಟ್ಟದ ಕೋಣವನ್ನು ಬಹಳ ವಿಜೃಂಭಣೆಯಿಂದ ಬಲಿ ಕೊಡುತ್ತಾರೆ. ನಂತರ ಎಲ್ಲ ದವಸ ಧಾನ್ಯಗಳನ್ನು ಒಂದು ಕೊಪ್ಪರಿಗೆಯಲ್ಲಿ ಬೇಯಿಸಿ ಚರುಗವನ್ನು ಊರಿನ ಸುತ್ತ ಗ್ರಾಮದ ಹರಿಜನ ವ್ಯಕ್ತಿಗಳು ಹಾಕುತ್ತ ಸಾಗುತ್ತಾರೆ. ನಂತರ ಆ ಗ್ರಾಮದ ಜನರೆಲ್ಲರೂ ಒಟ್ಟಿಗೆ ಸೇರಿಕೊಂಡು ದೇವಸ್ಥಾನಕ್ಕೆ ಹೋಗಿ ದೇವಿಯ ದರ್ಶನ ಪಡೆದುಕೊಳ್ಳುತ್ತಾರೆ.

ಚಿರಸ್ತಹಳ್ಳಿ ಚೈತ್ರಮಾಸದಲ್ಲಿ ಆಂಜನೇಯ ಮತ್ತು ಕಳಕ ಮಲ್ಲೇಶ್ವರ ಸ್ವಾಮಿ ಜಾತ್ರೆ ಯುಗಾದಿಯಾದ ಒಂಬತ್ತು ದಿನದ ನಂತರ ನಡೆಯುತ್ತದೆ. ಸೋಮವಾರ ಕಳಕ ಮಲ್ಲೇಶ್ವರ ರಥೋತ್ಸವ ನಡೆದರೆ ಮರುದಿನ ಆಂಜನೇಯ ಸ್ವಾಮಿಯು ಮಾಚಿಹಳ್ಳಿ ಗುಡ್ಡಕ್ಕೆ ಬೇಟೆಗೆ ಹೋಗಿ ಅಲ್ಲಿ ಪೂಜೆಯನ್ನು ಮಾಡಿಕೊಂಡು ನಂತರ ಮಾಚಿಹಳ್ಳಿಗೆ ಬಂದು, ಊರಿನ ಮುಖ್ಯಸ್ಥರಿಂದ ಆತಿಥ್ಯವನ್ನು ಸ್ವೀಕರಿಸಿ ಮರಳಿ ತಮ್ಮ ಊರಿಗೆ ಬರುವಾಗ ಗ್ರಾಮದ ಗಡಿಗಲ್ಲಿಗೆ ಪೂಜೆ ಸಲ್ಲಿಸುತ್ತಾರೆ. ಮತ್ತೆ ತಮ್ಮ ಚಿರಸ್ತಹಳ್ಳಿಗೆ ಬಂದು ಊರ ಮುಂದಿರುವ ಬನ್ನಿ ಕಟ್ಟೆಯ ಮೇಲೆ ದೇವರನ್ನು ಹಿಡಿದುಕೊಂಡು ಸ್ವಲ್ಪ ಸಮಯ ಅಲ್ಲಿಯೇ ತಂಗುತ್ತಾರೆ. ಆ ಸಂದರ್ಭದಲ್ಲಿ ಕುರುಬರ ಮನೆಯಿಂದ ದೇವರಿಗೆ ಮೀಸಲು ಹಾಲನ್ನು ತಂದು ದೇವರಿಗೆ ನೈವೇದ್ಯ ಹಿಡಿದು ಗುಡ್ಡಕ್ಕೆ ಹೋಗಿ ಬಂದಿರುವ ಜಂಗಮರಿಗೆ, ಅರ್ಚಕರಿಗೆ ಮತ್ತು ದಾಸಪ್ಪನಿಗೆ ಕುರುಬರು ಹಾಲನ್ನು ಕೊಡುತ್ತಾರೆ. ನಂತರ ಗ್ರಾಮದ ಬಣಕಾರನು ತಮ್ಮ ಮನೆಯಿಂದ ಸಜ್ಜೆಯಿಂದ ಮಾಡಿದ ಕಡುಬುಗಳನ್ನು ತರುತ್ತಾನೆ. ಆ ಸಮಯದಲ್ಲಿ ದೇವರನ್ನು ಬುಡ್ಡೆಕಲ್ಲು ಹತ್ತಿರ ನಿಲ್ಲಿಸಿ ಬಣಕಾರನು ತಂದ ಕಡುಬುಗಳಿಂದ ಕಾಳಗವನ್ನು ನಡೆಸುತ್ತಾರೆ. ಇದರಿಂದ ಕೆಳಗೆ ಬಿದ್ದ ಕಡುಬುಗಳನ್ನು ಆರಿಸಿಕೊಂಡು ಹೋಗಿ ಮಳೆಗಾಲದಲ್ಲಿ ಬೀಜ ಬಿತ್ತುವಾಗ ಕಡುಬನ್ನು ಸೇರಿಸಿಕೊಂಡು ಬಿತ್ತಿದರೆ ಬೆಳೆಯು ಹೆಚ್ಚು ಫಲಿಸುವುದೆಂದು ಜನಪದರ ನಂಬಿಕೆಯಾಗಿದೆ.

ಬುಧವಾರ ಬೆಳಗಿನ ಜಾವ ಶ್ರೀ ಕಳಕ ಮಲ್ಲೇಶ್ವರಸ್ವಾಮಿ ದೇವಸ್ಥಾನದ ಮುಂಭಾಗದಲ್ಲಿ ೨೦ ಅಡಿ ಉದ್ದ ೧೦ ಅಡಿ ಅಗಲ ೪ ಅಡಿ ಆಳದ ಅಗ್ನಿಕುಂಡವನ್ನು ತೆಗೆಯುತ್ತಾರೆ. ಅದಕ್ಕೆ ಉಪ್ಪಾರ

ಜನಾಂಗದವರು ಕಾಡಿನಲ್ಲಿ ತುಗಲಿ ಕಟ್ಟಿಗೆಯನ್ನು ಅಗ್ನಿಕುಂಡಕ್ಕೆ ಹಾಕಿ ಅಗ್ನಿಯನ್ನು ಸ್ಪರ್ಶಿಸುತ್ತಾರೆ. ಇದನ್ನು ಮಾಡುವ ಹಿಂದಿನ ದಿನ ರಾತ್ರಿಯೇ ಪುರವಂತರು ಕಾರ್ಯಕ್ರಮವನ್ನು ಮಾಡಲು ಸಿದ್ಧತೆಯನ್ನು ಮಾಡಿಕೊಂಡಿರುತ್ತಾರೆ. ಬೆಳಗಿನ ಜಾವ ೫ ಗಂಟೆಗೆ ಸ್ನಾನ ಮಾಡಿಕೊಂಡು ಗಂಗೆಗೆ ಹೋಗಿ ಕಾಶಿಯನ್ನು (ವೀರಭದ್ರ ವೇಷ) ಧರಿಸುತ್ತಾರೆ. ತಾವು ತೆಗೆದುಕೊಂಡು ಹೋಗಿದ್ದ ಮೂರ್ತಿ ಹಾಗು ಅದರ ಆಯುಧಗಳಿಂದ ಪೂಜೆ ಮಾಡುತ್ತಾರೆ. ನಂತರ ಆ ಪುರವಂತರು ವೀರಗಾಸೆ, ಕಾವಿ, ರುದ್ರಾಕ್ಷಿಮಾಲೆ, ಕಿವಿಗೆ ರುದ್ರಾಕ್ಷಿ, ಹಣೆಗೆ ವಿಭೂತಿ, ಬಲಗೈಯಲ್ಲಿ ಖಡ್ಗ, ಕಾಶಿಯನ್ನು ಧರಿಸಿಕೊಂಡು ವಿಜೃಂಭಣೆಯಿಂದ ಶಸ್ತ್ರಗಳನ್ನು ಹಾಕಿಕೊಳ್ಳುತ್ತಾರೆ. ಇವರ ಜೊತೆಯಲ್ಲಿ ಕೆಲವು ಭಕ್ತಾದಿಗಳು ಸಹ ಶಸ್ತ್ರ(ತಾಮ್ರ ತಂತಿಯ ಕವಚ) ಹಾಕಿಕೊಂಡು ಆವೇಶಪೂರ್ಣವಾಗಿ ಕುಣಿಯುತ್ತಾರೆ. ಅಗ್ನಿಕುಂಡದ ಮುಂಭಾಗದಲ್ಲಿ ಒಂದು ಸಮಾಳವನ್ನು ಬಾರಿಸುತ್ತ ಒಡಪುಗಳನ್ನು ಹೇಳುತ್ತಾರೆ. ಎಲ್ಲ ಭಕ್ತಾದಿಗಳು ಶಿವನಾಮ ಪಠಿಸುತ್ತಾ ಅಗ್ನಿಕೊಂಡದಲ್ಲಿ ನಡೆದುಕೊಂಡು ದೇವಸ್ಥಾನದ ಒಳಗೆ ಹೋಗುತ್ತಾರೆ. ನಂತರ ಎಲ್ಲರೂ ಸೇರಿ ಕಳಕ ಮಲ್ಲೇಶ್ವರಸ್ವಾಮಿಯನ್ನು ತೊಟ್ಟಿಲಲ್ಲಿ ಇಟ್ಟು ಮಗುವಿನಂತೆ ಜೋಗುಳವನ್ನು ಹಾಡುತ್ತ ಆ ಮೂರ್ತಿಯನ್ನು ಪೂಜಿಸಿ, ನಂತರ ಭಕ್ತಾದಿಗಳು ಪ್ರಸಾದ ತೆಗೆದುಕೊಂಡು ಹೋಗುತ್ತಾರೆ. ಇಂಥ ಸಂಪ್ರದಾಯ ಇಂದಿಗೂ ಉಳಿಸಿಕೊಂಡು ಬಂದಿರುವುದು ವಿಶೇಷ ಎನ್ನಲಾಗಿದೆ.

## ೫.೫. ಹಬ್ಬಗಳು

ಇತ್ತೀಚೆಗೆ ಮಾನವನ ಬಾಳು ತೀರ ಯಾಂತ್ರಿಕವಾಗಿದೆ. ನಿಯತವಾದ ಕ್ರಿಯೆಗಳಲ್ಲಿ ಮತ್ತೆ ಮತ್ತೆ ಉರುಳಿ ಬರುತ್ತಲೇ ಇರುತ್ತವೆ. ಏಕತಾನತೆಯ ಈ ಬದುಕಿಗೆ ಬದಲಾವಣೆ ಬೇಕು. ವೈವಿಧ್ಯತೆ ಬೇಕು. ಅದಿಲ್ಲದಿದ್ದರೆ ಬದುಕು ನೀರಸ. ಆದುದರಿಂದಲೇ ಮಾನವ ಸಮುದಾಯ ಅನಾದಿಕಾಲದಿಂದಲೂ ಹೊಸತನವನ್ನು ಹುಡುಕುತ್ತ ಬಂತು. ಈ ಅನ್ವೇಷಣೆಯ ಫಲವೇ ನಾವು ಆಚರಿಸುವ ಹಬ್ಬಗಳು.[೧೧]

ಮಹಾಕವಿ ಕಾಳಿದಾಸ ಹೇಳಿದ ಹಾಗೆ ಮನುಷ್ಯರೆಲ್ಲ ಉತ್ಸವಪ್ರಿಯರು. ನಿತ್ಯದ ಬದುಕಿನ ಜಂಜಾಟದಿಂದ ಒಂದಿಷ್ಟು ಬಿಡುವು ಪಡೆಯಲು ಬಾಳಿಗೆ ಹೊಸ ಉತ್ಸಾಹ ತುಂಬಲು ಇಂತಹ ಹಬ್ಬಗಳು ಬೇಕೇ ಬೇಕು. ಅವಿಲ್ಲದಿದ್ದರೆ ಬದುಕು ಬರಡು. ನಿಂತ ನೀರಾಗುತ್ತದೆ. ಆದ್ದರಿಂದ ಹಬ್ಬವೆಂದರೆ ಮಾನವರಿಗೆಲ್ಲ ಚೈತನ್ಯದ ಚಿಲುಮೆ, ಉತ್ಸಾಹ ಹೊಸ ಕಾರಂಜಿಯಾಗಿರುತ್ತದೆ.[೧೨]

ಭಾರತೀಯರಲ್ಲಿ ಅದರಲ್ಲೂ ಹಿಂದೂಗಳಲ್ಲಿ ಪ್ರತಿವರ್ಷಕ್ಕೊಮ್ಮೆ, ತಿಂಗಳಿಗೆ, ಹದಿನೈದು ದಿನಗಳಿಗೊಮ್ಮೆ ನಡೆಯುವ ಹಬ್ಬಗಳೆಲ್ಲ ಒಂದರ್ಥದಲ್ಲಿ ಧಾರ್ಮಿಕ ಉತ್ಸವಗಳೇ. ಧಾರ್ಮಿಕ ಶ್ರದ್ಧೆ ಕ್ರಿಯೆ ಮತ್ತು ಭಾವನೆಗಳಿಗೆ ಅಲ್ಲಿ ಪ್ರಾಧಾನ್ಯತೆ ಜೊತೆಗೆ ಸಾಮಾಜಿಕ, ಸಾಂಸ್ಕೃತಿಕ ಅಂಶಗಳು ಸೇರಿಕೊಂಡಿವೆ. ನಮ್ಮ ಕೆಲವು ಹಬ್ಬಗಳು ಸಂವತ್ಸರ ಚಕ್ರದ ಮಾರ್ಗದ ಬದಲಾವಣೆಗೆ ಸಂಬಂಧಿಸಿವೆ. ಉದಾಹರಣೆಗೆ ಮಕರ ಸಂಕ್ರಾಂತಿ ಮತ್ತು ಋತುಗಳ ಬದಲಾವಣೆಗೆ ಸಂಬಂಧಪಟ್ಟ ಹಬ್ಬಗಳು ಗಣಪತಿ

ಹಬ್ಬ, ನಾಗರ ಪಂಚಮಿ, ವಿಜಯದಶಮಿ, ದೀಪಾವಳಿ, ಶಿವರಾತ್ರಿ, ಯುಗಾದಿ, ಹೋಳಿ ಹಬ್ಬ ಮೊದಲಾದವು. ಇಲ್ಲಿ ಮುಸ್ಲಿಂ ಸಮುದಾಯವು ತಮ್ಮ ಹಬ್ಬಗಳನ್ನು ಆಚರಿಸುತ್ತಾರೆ.

### ಯುಗಾದಿ ಹಬ್ಬ

ಯಗಾದಿ ಹಬ್ಬದ ಆಚರಣೆ ಹಳೆಯ ಮತ್ತು ಹೊಸವರ್ಷಗಳನ್ನು ಜೋಡಿಸುವ ಸುವರ್ಣ ಸೇತುವೆ. ಯುಗಾದಿ ಫಾಲ್ಗುಣ ಬಹುಳ ಅಮವಾಸ್ಯೆಯ ದಿನ ಹಳೆಯ ವರ್ಷಕ್ಕೆ ವಿದಾಯ ಹೇಳಿ ಮರುದಿನ ಚೈತ್ರ ಶುಕ್ಲ ಪ್ರತಿಪದೆಯೆಂದು ಹೊಸವರ್ಷವನ್ನು ಸ್ವಾಗತಿಸುತ್ತೇವೆ.

ಈ ಹಬ್ಬದ ಆಚರಣೆಗೆ ಸಂಬಂಧಿಸಿದಂತೆ ನೀಲಗುಂದ ಪರಿಸರದ ಕನ್ನಡಿಗರಿಗೆ ಒಂದು ಅರ್ಥಪೂರ್ಣ ಗಾದೆ ಇದೆ. 'ಉಂಡದ್ದೇ ಉಗಾದಿ, ಮಿಂದದ್ದೇ ದೀಪಾವಳಿ" ದೀಪಾವಳಿಯಲ್ಲಿ ಅಭ್ಯಂಜನ ಸ್ನಾನಕ್ಕೆ ವಿಶೇಷ ಪ್ರಾಮುಖ್ಯವಾದರೆ, ಯುಗಾದಿಯಲ್ಲಿ ಭೋಜನಕ್ಕೆ ಆದ್ಯತೆ ಎಂದು ಹೇಳಬಹುದು.

ಯುಗಾದಿ ಎಂದ ಕೂಡಲೇ ನೆನಪಿಗೆ ಬರುವುದು ಬೇವು-ಬೆಲ್ಲ. ಬೇವಿನ ಚಿಗುರಿನ ಕಹಿ, ಬೆಲ್ಲದ ಸಿಹಿ ಇವೆರಡು ಬದುಕಿನ ಪ್ರತೀಕ. ನೋವು-ನಲಿವುಗಳ ಸಂಕೇತ. ದೃಷ್ಟಿ-ಅದೃಷ್ಟಗಳ ಪ್ರತಿಬಿಂಬ ಯುಗಾದಿಯ ದಿನ. ಉಷಃಕಾಲದಲ್ಲಿ ಭಗವಂತನನ್ನು ಸ್ಮರಿಸುತ್ತ ಬಲಮಗ್ಗುಲಲ್ಲಿ ಏಳಬೇಕು, ಅಭ್ಯಂಜನ ಸ್ನಾನ ಮಾಡಿ ಹೊಸಬಟ್ಟೆ ತೊಟ್ಟು ಪ್ರಸನ್ನ ವದನರಾಗಿ ದೇವರಪೂಜೆ ನಡೆಸಿ, ಗುರು-ಹಿರಿಯರಿಗೆ ನಮಸ್ಕಾರ ಮಾಡಿ, ಮೊದಲು ಬೇವು ಬೆಲ್ಲ ತಿಂದು, ಅನಂತರ ಹೋಳಿಗೆ ಪಾಯಸಗಳನ್ನು ಊಟ ಮಾಡುವುದು ರೂಢಿ. ಸಾಯಂಕಾಲ ಗ್ರಾಮದ ಜನರು ಸೇರಿಕೊಂಡು ವಿವಿಧ ಕ್ರೀಡೆಗಳನ್ನು ನಡೆಸುತ್ತಾರೆ.

ಸಂಜೆಯ ಸಮಯದಲ್ಲಿ ಪಂಚಾಂಗ ಶ್ರವಣ ಚಂದ್ರೋದಯ ಕಾಲದಲ್ಲಿ ಪೂರ್ವ ದಿಗಂತದಲ್ಲಿ ಮೂಡಿ ಬಂದಿರುವ ಒಂದು ಕಲೆಯಿಂದ ಬೆಳಗಿಸುವ ಚಂದ್ರನನ್ನು ಕಂಡು ನಮಸ್ಕರಿಸುವುದು ಈ ಪರಿಸರದಲ್ಲಿ ವಿಶೇಷ ಎನ್ನಲಾಗಿದೆ.

### ನಾಗರ ಪಂಚಮಿ

ಭಾರತದಲ್ಲಿ ನಾಗಾರಾಧನೆ ವಿಶಿಷ್ಟವಾಗಿ ಬೆಳದುಬಂದಿದೆ. ವೇದ, ಪುರಾಣ, ಮಹಾಕಾವ್ಯ, ಕಾವ್ಯ, ಜನಪದ ಸಾಹಿತ್ಯ ಇಲ್ಲೆಲ್ಲ ನಾಗನಿಗೆ ಸಂಬಂಧಿಸಿದ ಹಲವಾರು ಉಲ್ಲೇಖಗಳಿವೆ. ಋಗ್ವೇದದ ಸರ್ಪಸೂಕ್ತದಲ್ಲಿ ನಾಗವರ್ಣನೆ ಇದೆ. ಹರಪ್ಪ ಸಂಸ್ಕೃತಿಯಲ್ಲಿ ನಾಗಾರಾಧನೆಗೆ ತುಂಬ ಮಹತ್ವ ನೀಡಲಾಗಿದೆ. ಜೈನ, ಬೌದ್ಧ, ಶೈವ, ವೈಷ್ಣವ ಮುಂತಾದ ಮತಗಳಲ್ಲಿಯೂ ನಾಗನಿಗೆ ವಿಶೇಷ ಪ್ರಾಧಾನ್ಯತೆ ಇದೆ. ಪಾರ್ಶ್ವನಾಥ ತೀರ್ಥಂಕರನ ತಲೆಯ ಮೇಲ್ಭಾಗದಲ್ಲಿ ನಾಗನ ಹೆಡೆಯ ಲಾಂಛನವಿದೆ.

ನಾಗನು ವಿಷ್ಣುವಿಗೆ ಹಾಸಿಗೆ, ಶಿವನಿಗೆ ಕಂಠಾಭರಣ, ಗಣಪತಿಗೆ ಹೊಟ್ಟೆ ಪಟ್ಟಿಯಾಗಿ, ಸ್ವತಃ ಭೂಭಾರವನ್ನು ಹೊತ್ತ ಅಸಾಧಾರಣ ಶಕ್ತಿಶಾಲಿಯಾಗಿದ್ದಾನೆ.

ನೀಲಗುಂದ ಪರಿಸರದಲ್ಲಿ ಈ ಹಬ್ಬವನ್ನು ವಿಶೇಷವಾದ ರೀತಿಯಲ್ಲಿ ಆಚರಣೆ ಮಾಡುವುದು ಕಂಡುಬಂದಿದೆ. ಈ ಗ್ರಾಮಗಳಲ್ಲಿ ಹಿಂದಿನಿಂದಲೂ ಬೆಳೆದು ಬಂದಂತ ಹಬ್ಬ ಇದಾಗಿದೆ. ಯಾವುದೇ ದೇವಾಲಯದ ಪಕ್ಕದಲ್ಲಿ ಸುಮಾರು ೧೦ರಿಂದ ೧೫ರವರೆಗೆ ನಾಗಶಿಲ್ಪ ಕಂಡುಬಂದಿವೆ.

ಈ ಹಬ್ಬವನ್ನು ಮೂರು ದಿನಗಳ ಕಾಲ ಆಚರಿಸಲಾಗುವುದು. ಮೊದಲನೆಯ ದಿನ ಅಮಾವಾಸ್ಯೆ ಆಚರಿಸುವುದು, ಎರಡನೆಯ ದಿನ ನಾಗರ ಶಿಲ್ಪಕ್ಕೆ ಹಾಲು ಹಾಕುವುದು. ನಂತರ ಕೈಗೆ ದಾರವನ್ನು ಕಟ್ಟಿಕೊಳ್ಳುವುದು. ಮೂರನೇ ದಿನ ಈ ನಾಗರಶಿಲ್ಪಕ್ಕೆ ಹೋಳಿಗೆ ನೈವೇದ್ಯ ಮಾಡುವುದು.

ಹಲುವಾಗಲು ಗ್ರಾಮದಲ್ಲಿ ಪಂಚಮಿ ಹಬ್ಬದ ಮೂರನೇ ದಿನ ಹೋಳಿಗೆ ಮಾಡಿ ಮನೆಯಲ್ಲಿ ಪೂಜಿಸಿದ ನಂತರ ಗ್ರಾಮದ ಪಕ್ಕದಲ್ಲಿ ಇರುವ ಗರ್ಭಗುಡಿಯ ಆಡಳಿತ ಮಾಡಿದ ಅರಸ ಗಿರಿಯಣ್ಣ ಮತ್ತು ಅರಸೀ ನಾಗಮ್ಮಾಜಿ-ನಾಗತಿ(ನಗೆ-ನಗೆತವ್ವ) ಇವರ ಸಮಾಧಿಗಳಿಗೆ ಸ್ಥಳೀಯ ಜನರು ಪ್ರತಿವರ್ಷ ಪೂಜೆ, ನೈವೇದ್ಯ ಮಾಡುವ ಸಂಪ್ರದಾಯ ಹಿಂದಿನಿಂದಲೂ ಪ್ರಚಲಿತದಲ್ಲಿದೆ. ನಂತರ ಹೊಳೆಯ ಹತ್ತಿರ ಹೋಗಿ ಗಂಗೆಯ ಪೂಜೆಯನ್ನು ಮಾಡಿ ನಂತರ ತಮ್ಮ ಹೊಲದಲ್ಲಿ ಬೆಳೆಯುವ ಬೆಳೆಗಳನ್ನು ಮತ್ತು ಭೂಮಿ ಹಾಗೂ ಕೊಳವೆ ಬಾವಿಗಳಿಗೆ ಪೂಜಿಸುವ ಸಂಪ್ರದಾಯ ಹಲುವಾಗಲುನಲ್ಲಿ ಈಗಲೂ ನಡೆಯುವುತ್ತಿರುವುದು ವಿಶೇಷವಾಗಿದೆ. ನೀಲಗುಂದ, ಕುಂಚೂರು ಮತ್ತು ಚಿರಸ್ತಹಳ್ಳಿಯಲ್ಲಿ ಇಂಥ ವಿಶೇಷವಿಲ್ಲದೆ, ಸಂಪ್ರದಾಯದಂತೆ ಈ ಹಬ್ಬವನ್ನು ಆಚರಿಸುತ್ತಾರೆ.

ಈ ಮೂರು ದಿನಗಳ ಕಾಲ ಸಾಯಂಕಾಲ ವಿವಿಧ ಕ್ರೀಡೆಗಳನ್ನು ಆಡುತ್ತಾರೆ. ನಿಂಬೆಹಣ್ಣು ಎಸೆಯುವುದು, ಕಾಯಿ ಹೊಡೆಯುವುದು, ಕಣ್ ಕಟ್ಟುವುದು ಇತ್ಯಾದಿ ಮನೋರಂಜನೆ ನಡೆಯುತ್ತದೆ.

### ದೀಪಾವಳಿ

ಹಿಂದೂಗಳು ಆಚರಿಸುವ ದೊಡ್ಡ ಹಬ್ಬಗಳಲ್ಲಿ ದೀಪಾವಳಿ ಮುಖ್ಯವಾದುದು. ಇದು ಪ್ರಾಂತ್ಯ ಭೇದವಿಲ್ಲದೆ, ಭಾರತದ ಎಲ್ಲ ಮೂಲೆಗಳಲ್ಲೂ ಆಚರಿಸಲಾಗುತ್ತದೆ. 'ಹಬ್ಬಗಳ ರಾಜ' ಎನ್ನಬಹುದಾದ ದೀಪಾವಳಿಗೆ ರಾಷ್ಟ್ರೀಯ ವ್ಯಾಪ್ತಿ ಇದೆ. ದೀಪಾಲಿ> ದೀಪಾಲಿಕಾ>ದೀಪಾವಳಿ ಇವೆಲ್ಲ ಇದರ ನಾಮಾಂತರಗಳು. ಪೌರಾಣಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಇದು ತುಂಬ ಮಹತ್ವದ ಹಬ್ಬ. ಇದು ಕತ್ತಲೆ-ಬೆಳಕುಗಳ ನಿರಂತರ ಹೋರಾಟದಲ್ಲಿ ಬೆಳಕು ಚೆಲ್ಲುವುದರ ಸಂಕೇತ. ಎಲ್ಲ ಜೀವಿಗಳ ಆಧಾರ, ಸಕಲ ಕ್ರಿಯೆಗಳ ಪ್ರೇರಕ, ಒಂದರ್ಥದಲ್ಲಿ ಬೆಳಕೇ ಬದುಕು. ಭಾರತೀಯರು ಬೆಳಕಿನ ಆರಾಧಕರು. ತಮಸೋಮ ಜ್ಯೋತಿರ್ಗಮಯ ಎಂಬಂತೆ ಕತ್ತಲೆಯಿಂದ ಬೆಳಕಿನ ಕಡೆಗೆ ನಮ್ಮ ಪ್ರಯಾಣ. ಈ ಕರುಣಾಳು ಬೆಳಕನ್ನು ಜ್ಞಾನ ಎಂದು ಉಪಾಸನೆ ಮಾಡುತ್ತಾರೆ.

ದೀಪಾವಳಿ ಹಬ್ಬದ ಆಚರಣೆ ಸಾಮಾನ್ಯವಾಗಿ ಎಲ್ಲ ಕಡೆಯಲ್ಲೂ ಒಂದೇ ಆಗಿದೆ. ನೀಲಗುಂದ ಪರಿಸರದಲ್ಲಿ ಈ ಹಬ್ಬದ ಸಂದರ್ಭದಲ್ಲಿ ಶ್ರೀಮಂತರು, ಸಾಮಾನ್ಯ ಮಧ್ಯಮ ವರ್ಗದ ಜನರು, ಎಲ್ಲ ಜಾತಿಯ ವರ್ಗದವರು ಲಕ್ಷ್ಮಿಯನ್ನು ಪೂಜಿಸುವ ಒಂದು ಸಂಪ್ರದಾಯವಿದೆ. ಅಲ್ಲದೇ ಅದೇ ಹಟ್ಟಿ ಹಾಕುವ ಒಂದು ನಂಬಿಕೆ ಈ ಭಾಗದಲ್ಲಿದೆ.

ವರ್ಣರಂಜಿತವಾದ ಈ ದೀಪಾವಳಿಯನ್ನು ಕನ್ನಡ ಕವಿಗಳು ಬಗೆ ಬಗೆಯಾಗಿ ಬಣ್ಣಿಸಿದ್ದಾರೆ. ಅನುದಿನ ಬದುಕಿಗೆ ದೀಪಾವಳಿ ನೀಡುವ ಪ್ರೇರಣೆ ಸಂದೇಶಗಳನ್ನು ನಿರೂಪಿಸಿದ್ದಾರೆ. ಕನ್ನಡ ಹಿರಿಯ ಕವಿ ಡಾ.ಡಿ.ಎಸ್ .ಕರ್ಕಿಯವರು ಹಬ್ಬಗಳ ಹಬ್ಬವಾದ ದೀಪಾವಳಿಯನ್ನು 'ಸಂಸ್ಕೃತಿಯ ದಿಬ್ಬ' ಎಂದು ಬಣ್ಣಿಸಿದ್ದಾರೆ.[೧೩]

### ದಸರಾ ಹಬ್ಬ

ದಸರಾ, ರಾಮಲೀಲಾ, ನಾಡಹಬ್ಬ ಎಂದು ಪ್ರಸಿದ್ಧಿ ಪಡೆದ ನವರಾತ್ರಿ ಆರಂಭವಾಗುವುದು ಅಶ್ವಯುಜ ಪಾಡ್ಯದಂದು. ನವಮಿಯವರೆಗೆ ಇದರ ವ್ಯಾಪ್ತಿ. ಈ ವ್ರತವನ್ನು ಅಶ್ವಯುಜ ಶುಕ್ಲ ಪ್ರತಿಪದೆಯಿಂದ ಆರಂಭಿಸಿ ನವಮಿವರೆಗೆ ಒಂಬತ್ತು ದಿನ ಆಚರಿಸುತ್ತಾರೆ. ಕೆಲವರುತದಿಗೆಯಿಂದ ಪ್ರಾರಂಭ ಮಾಡಿ ಏಳುದಿನ ಆಚರಿಸುತ್ತಾರೆ. ಕೆಲವರು ಪಂಚಮಿಯಿಂದ ಐದು ದಿನ ಆಚರಿಸುತ್ತಾರೆ. ಸಪ್ತಮಿಯಿಂದ ಮೂರು ದಿನ ಆಚರಿಸುತ್ತಾರೆ. ಕೆಲವರು ಅಷ್ಟಮಿ ಮೊದಲ್ಗೊಂಡು ಎರಡು ದಿನ ಅಥವಾ ಅಷ್ಟಮಿ-ನವಮಿ- ಇವುಗಳಲ್ಲಿ ಒಂದು ದಿನ ಆಚರಿಸಬಹುದು.

ಕನ್ನಡಿಗರ ಪಾಲಿಗೆ ನವರಾತ್ರಿ ನಾಡಹಬ್ಬ. ಈ ಹಬ್ಬದಲ್ಲಿ ನೀಲಗುಂದ ಮತ್ತು ಚಿರಸ್ತಹಳ್ಳಿಯಲ್ಲಿ ಸಂಪ್ರದಾಯದಂತೆ ಮಾಡಿದರೆ ಹಲುವಾಗಲು ಗ್ರಾಮದಲ್ಲಿ ಈ ಹಬ್ಬದಲ್ಲಿ (ಊರಮ್ಮ) ಗ್ರಾಮದೇವತೆಯ ದೇವಾಲಯದಲ್ಲಿ ಒಂಬತ್ತು ದಿನಗಳ ಕಾಲ ಪುರಾಣ ಪ್ರವಚನ ಇಡುತ್ತಾರೆ. ಒಂಬತ್ತನೇ ದಿನದಂದು ದಾಸೋಹ ಮಾಡಿ, ಗ್ರಾಮದ ಎಲ್ಲ ಜನತೆಯು ದೇವಸ್ಥಾನದಲ್ಲಿ ಊಟ ಮಾಡುತ್ತಾರೆ. ಸಾಯಂಕಾಲ ಬನ್ನಿಯನ್ನು ಕೊಡಲು ಹಲುವಾಗಲು ಗ್ರಾಮದ ಜನತೆಯು ಊರ ಮುಂದಿನ ಬನ್ನಿಕಟ್ಟೆಯ ಹತ್ತಿರ ಹೋಗಿ ತಾವು ಬೆಳೆದು ಜೋಳ ಸೊಪ್ಪೆಯ ಬೇರನ್ನು ಕಿತ್ತು ತಂದು ಅಲ್ಲಿ ಬನ್ನಿ ತರಲು ಹೆಣ್ಣು ಸಮಾನ ರೀತಿಯಲ್ಲಿ ಹೋಗಿ ಬನ್ನಿ ತಂದು ಗ್ರಾಮದ ಹಿರಿಯರಿಗೆ, ಸ್ವಾಮಿಗಳಿಗೆ, ಇತರ ಪರಿಚಿತ, ಅಪರಿಚಿತ ವ್ಯಕ್ತಿಗಳಿಗೆ ಬನ್ನಿಯನ್ನು ಕೊಡುವ ಸಂಪ್ರದಾಯ ಈ ಪರಿಸರದಲ್ಲಿದೆ.

### ಮಹಾಶಿವರಾತ್ರಿ

"ಶಿವ-ಶಿವ ಎಂದರೆ ಸಿಡಿಲೆಲ್ಲ ಬಯಲಾಗಿ
ಕಲ್ಲು ಬಂದೆರಗಿ ಕಡೆಗಾಗಿ | ಎಲೆ ಮಾನವ
ಶಿವನೆಂಬ ಶಬ್ದವ ಬಿಡಬ್ಯಾಡ|"

ಎಂಬಂತೆ ಶಿವಧ್ಯಾನ ನಿರತರಾಗಿದ್ದರೆ ಯಾವ ವಿಪತ್ತು ಬರಲಾರದು. ನಮ್ಮ ಪ್ರಾಚೀನರ ನಂಬಿಕೆಯಂತೆ ಶಿವನ ಧ್ಯಾನ-ಆರಾಧನೆಗಳಿಗೆ ಅತ್ಯಂತ ಪ್ರಶಸ್ತವಾದ ದಿನ ಶಿವರಾತ್ರಿ. ಪ್ರತಿ ಅಮಾವಾಸ್ಯೆಯ ಹಿಂದಿನ ದಿನ ಮಾಸ ಶಿವರಾತ್ರಿಯಾದರೆ ಮಾಘ ಬಹುಳ ಚತುರ್ದಶಿ ಮಹಾ ಶಿವರಾತ್ರಿಯಾಗಿದೆ.[೧೪]

ನೀಲಗುಂದ ಪರಿಸರದಲ್ಲಿ ಬರುವ ಎಲ್ಲ ಗ್ರಾಮಗಳಲ್ಲಿ ಶಿವರಾತ್ರಿಯ ದಿನ ಅರುಣೋದಯಕ್ಕೆ ಎದ್ದು ಸ್ನಾನ ಮಾಡಿ ಶುಭ್ರ ವಸ್ತ್ರವನ್ನುಟ್ಟು ಸಮಸ್ತ ಪಾಪ ನಿವಾರಣೆಗಾಗಿ, ಜ್ಞಾನ ಮೋಕ್ಷ ಪ್ರಾಪ್ತಿಗಾಗಿ ಶಿವರಾತ್ರಿಯನ್ನು ಆಚರಿಸುತ್ತಾರೆ. ಅಂದು ಕೆಲವು ಭಕ್ತಾದಿಗಳು ಒಪ್ಪತ್ತು(ಸಾಯಂಕಾಲ ಊಟ ಮಾಡುವುದು) ಊಟವನ್ನು ಮಾಡುತ್ತಾರೆ. ಅಸಮರ್ಥರಾಗಿದ್ದರೆ ಕ್ಷೀರಾಹಾರ ಅಥವಾ ಫಲಾಹಾರ ಪ್ರದೋಷ ಕಾಲದಲ್ಲಿ ಶಿವಾಲಯಕ್ಕೆ ಹೋಗಿ ರಾತ್ರಿ ನಾಲ್ಕು ಯಾಮಗಳಲ್ಲಿ ರುದ್ರಾಭಿಷೇಕ ಮಾಡಿಸಿ "ನಾನಾ ವಿಧದ ಪಾಪ ಕರ್ಮಗಳಿಂದ ಭವ ಬಂಧನದಲ್ಲಿ ಸಿಲುಕಿದ ನನ್ನನ್ನು ಹಾಗು ನನ್ನ ಕುಟುಂಬದವರಿಗೆ ಸುಖವನ್ನು ಕೊಡು, ನಮ್ಮನ್ನು ಉದ್ಧರಿಸು" ಎಂದು ಬೇಡಿಕೊಳ್ಳುವರು.

## ಗಣಪತಿ ಹಬ್ಬ

ಗಣಪತಿಯು ಯಾವುದೇ ಮತ ಅಥವಾ ಸಂಪ್ರದಾಯಗಳ ದೇವತೆ ಅಲ್ಲ. ಭಾರತೀಯ ಜನಾಂಗದಲ್ಲಿ ಶತ ಶತಮಾನಗಳ ಜೀವನದಲ್ಲಿ ಹಾಸು ಹೊಕ್ಕಾಗಿ ಬೆಳೆಯುತ್ತ ಬಂದಿರುವ ರಾಷ್ಟ್ರೀಯ ದೇವತೆ. ಆರಂಭದಿಂದಲೂ ಸರ್ವ ಕಾಲ ದೇಶಗಳಲ್ಲೂ ನೆಲಸಿ, ಪೂಜೆಗೊಂಡ ದೇವತೆ. ಗಣೇಶನ ಪ್ರಭಾವ ವಿಶ್ವ ವ್ಯಾಪಕವಾದುದು.

ಗಣಪತಿ ಹಿಂದೂ ಧರ್ಮದ ಎಲ್ಲ ಪಂಥಗಳ ಅಗ್ರಪೂಜೆಗೆ ಪಾತ್ರನಾಗಿರುವ ಏಕೈಕ ದೇವತೆ. ಶಿವನನ್ನೇ ಪೂಜಿಸಬೇಕೆನ್ನುವರು, ವಿಷ್ಣುವೇ ಸರ್ವೋತ್ತಮ ಎಂದು ನಂಬಿದವರು. ಗಣಪತಿಯನ್ನೇ ಆರಾಧಿಸುವ 'ಗಾಣಪತ್ಯ' ಎಂಬ ಪಂಥವೂ ನಮ್ಮ ದೇಶದಲ್ಲುಂಟು. ಕವಿಗಳ ಕಲ್ಪನೆ, ಕಲಾವಿದರ ಚಿತ್ರಣ, ಭಕ್ತಾದಿಗಳ ಸ್ತೋತ್ರ, ರಸಿಕರ ರಸಿಕತೆ ಇವೆಲ್ಲವೂ ಈ ದೇವತೆಯ ಪಾಲಿಗೆ ಸಮೃದ್ಧವಾಗಿ ಸಂಧಿವೆ. ಈ ಸಾರ್ವಜನಿಕ ಗಣೇಶೋತ್ಸವ ಬಂತೆಂದರೆ ಸಾಕು ಬಗೆ ಬಗೆಯ ಸಾಂಸ್ಕೃತಿಕ ಕಾರ್ಯಕ್ರಮ ನೀಡಲು ಹಾಡುಗಾರರು, ವಾದ್ಯಗಾರರು, ನೃತ್ಯಕಲಾವಿದರು, ಯಕ್ಷಗಾನ ಪಟುಗಳು ಈ ನೀಲಗುಂದದ ಪರಿಸರದಲ್ಲಿ ಮುಂದಾಗುತ್ತಾರೆ. ಅದರಲ್ಲಿ ನೀಲಗುಂದ, ಕುಂಚೂರು, ಚಿರಸ್ತಹಳ್ಳಿ ಮತ್ತು ಹಲುವಾಗಲು ಈ ಸ್ಥಳಗಳಲ್ಲಿ ವಿಶೇಷವಾಗಿ ಈ ಹಬ್ಬವನ್ನು ಆಚರಿಸುತ್ತದೆ. ಈ ಜನಪ್ರಿಯ ದೇವತೆಯ ಹುಟ್ಟು, ಬೆಳವಣಿಗೆಗೆ ಇಂದು ನಿನ್ನೆಯದಲ್ಲ, ಶತ ಶತಮಾನಗಳಷ್ಟು ಹಿಂದಿನದು. ಭಾರತದಲ್ಲಿ ಮಾತ್ರವಲ್ಲ ಭಾರತೀಯ ಸಂಸ್ಕೃತಿಯಲ್ಲಿ ವ್ಯಾಪಿಸಿದ ಕಡಲಾಚೆಯ ಪ್ರದೇಶಗಳಲ್ಲೂ ಗಣಪತಿಯು ಅಚ್ಚುಮೆಚ್ಚಿನ ದೇವರು. ವಿಶ್ವವ್ಯಾಪಿಯಾದ ಈ ಗಣಪತಿಯ ಆರಾಧನೆ ಇಂದಿಗೆ ಮಾತ್ರವಲ್ಲ ಎಂದೆಂದಿಗೂ ಪ್ರಸ್ತುತವೆನಿಸುತ್ತದೆ.

### ಕಾಮನ ಹಬ್ಬ

ಫಾಲ್ಗುಣ ಶುದ್ಧ ಹುಣ್ಣಿಮೆಯೆಂದು ಆಚರಿಸುವ ಕಾಮನ ಹಬ್ಬಕ್ಕೆ 'ಹೋಳಿಹಬ್ಬ' ಎಂದು ಹೆಸರು. ಫಾಲ್ಗುಣೋತ್ಸವ, ಮದನೋತ್ಸವ ಎಂದು ಕರೆಯಲಾಗುವುದು. ವಸಂತ ವಿಷ್ಣುವತ್ಕಾಲ ಅಂದಿನಿಂದ ಆರಂಭವಾಗುವುದರಿಂದ ವೈದಿಕ ಕಾಲಮಾನದಂತೆ ನೂತನ ವರ್ಷಾರಂಭವೂ ಹೌದು. ಪ್ರಥಮ ಚಾತುರ್ಮಾಸ್ಯ ವ್ರತವೂ ಅಂದಿನಿಂದಲೇ ಆರಂಭವಾಗುತ್ತದೆ.

ಕಾಮನ ಹಬ್ಬ ಶಿವನು ತನ್ನ ಮೂರನೇ ಕಣ್ಣಿನಿಂದ ಕಾಮನನ್ನು ಸುಟ್ಟು, ಪುನಃ ಅವನಿಗೆ ಅಶರೀರದಿಂದ ಚಿರಂಜೀವತ್ವವನ್ನು ಕರುಣಿಸಿದ ಪ್ರಸಂಗದ ನೆನಪಿಗಾಗಿ ಆಚರಿಸುವ ಹಬ್ಬ ಎಂಬ ಭಾವನೆ ಇದೆ. ಅಂದರೆ ಅದು ಚೈತ್ರ ಮಾಸದಲ್ಲಿ ಬರುವ ಮದನ ಮಹೋತ್ಸವ ಎಂಬ ಬೇರೊಂದು ಹಬ್ಬವೆಂದು ಕೆಲವರ ಅಭಿಮತ. ಈ ಕಾರಣದಿಂದ ಈ ಹಬ್ಬಕ್ಕೆ ಕಾಮನಹಬ್ಬ ಎನ್ನುವುದಕ್ಕಿಂತ ಹೋಳಿ ಹಬ್ಬ ಎನ್ನುವರು.

ನೀಲಗುಂದ, ಹಲವಾಗಲು, ಕುಂಚೂರು ಮತ್ತು ಚಿರಸ್ತಹಳ್ಳಿ ಈ ಪರಿಸರದಲ್ಲಿ ಕಾಮನ ಹಬ್ಬದಂದು ಹೋಳಿ ಅಥವಾ ಬಣ್ಣವನ್ನು ಹಾಕುವ ಸಂಪ್ರದಾಯ ಇದೆ. ಬೆಳಗಿನಿಂದ ೧೨ ಗಂಟೆಯವರಿಗೆ ವಿಶೇಷ ರೀತಿಯಲ್ಲಿ ಈ ಸಂಪ್ರದಾಯವನ್ನು ಈ ಗ್ರಾಮದಲ್ಲಿ ಮಾಡುವುದು ಕಂಡುಬರುತ್ತದೆ.

### ಮಕರ ಸಂಕ್ರಾಂತಿ

ಇದು ಜಗತ್ತಿಗೆ ಕಣ್ಣಾದಂತಹ ಸೂರ್ಯನ ಚಲನೆಯ ಹಬ್ಬ. ಸಂಸ್ಕೃತದಲ್ಲಿ 'ಕ್ರಮಣ' ಎಂದರೆ 'ಹೆಜ್ಜೆ ಇಡುವಿಕೆ' ಎಂದರ್ಥ. ಸೂರ್ಯ ಪ್ರತಿ ತಿಂಗಳೂ ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಪ್ರವೇಶಿಸುವ ಸಂಧಿಕಾಲವನ್ನು ಸಂಕ್ರಾಂತಿ ಎಂದು ಕರೆಯಲಾಗುತ್ತದೆ. ಆದರೆ ಕೆಲವು ಸಂಕ್ರಾಂತಿಗಳಿಗೆ ವಿಶೇಷವಾದ ಮಹತ್ವ ಇದೆ.

ಯುಗಾದಿಯು ಬೇವು-ಬೆಲ್ಲದ ಹಬ್ಬವಾದರೆ, ಸಂಕ್ರಾಂತಿಯು ಎಳ್ಳು-ಬೆಲ್ಲದ ಹಬ್ಬ. ಅಂದು ಎಳ್ಳೆಣ್ಣೆಯನ್ನು ಮೈಗೆ ಹಚ್ಚಿಕೊಂಡು ಸ್ನಾನ ಮಾಡಿ, ಎಳ್ಳಿನ ದಾನ, ಎಳ್ಳಿನ ಹೋಮ, ಎಳ್ಳೆಣ್ಣೆಯ ದೀಪಗಳನ್ನು ಬೆಳಗಿಸುವುದು ಸಂಪ್ರದಾಯವಾಗಿದೆ. "ಎಳ್ಳು ಯಾವಾಗಲೂ ಪಾಪಗಳನ್ನು ಪರಿಹರಿಸುವುದು. ದೇಹದ ಬಲ ಮತ್ತು ಪುಷ್ಟಿಗಳನ್ನು ಬೆಳೆಸುವುದು. ಆದ್ದರಿಂದ ಅದನ್ನು ಈಗ ದಾನ ಮಾಡುತ್ತಿರುವೆನು. ಇದರಿಂದ ನನಗೆ ಶಾಂತಿಯನ್ನು ಕೊಡು" ಎಂಬುದು ಎಳ್ಳುದಾನ ಮಾಡುವ ಸಂದರ್ಭದಲ್ಲಿ ಹೇಳುವ ಶ್ಲೋಕದ ಸಾರ. ಬರಿಯ ಎಳ್ಳನ್ನು ಮಾತ್ರ ಕೊಡುವುದು ಅಷ್ಟು ಪ್ರಶಸ್ತವಲ್ಲವೆಂದು ಜೊತೆಗೆ ಬೆಲ್ಲವನ್ನೂ ಸೇರಿಸಲಾಗುವುದು. 'ಎಳ್ಳು-ಬೆಲ್ಲ ತಿಂದು ಒಳ್ಳೆಯ ಮಾತಾಡು' ಎಂಬುವುದು ಈ ಪರಿಸರದ ಜನತೆಯಲ್ಲಿ ಬೆಳೆದು ಬಂದಿದೆ. ಈ ಹಬ್ಬವನ್ನು ಕೆಲವು ವರ್ಗದವರು ಆಚರಿಸುವ ಸಂಪ್ರದಾಯ ಇದೆ.

ಅಡಿಟಿಪ್ಪಣಿಗಳು

೧. ಚಿದಾನಂದಮೂರ್ತಿ ಎಂ., ೨೦೦೨, ಕರ್ನಾಟಕ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೪೦೪

೨. ದೇವರಕೊಂಡಾರೆಡ್ಡಿ ಮತ್ತು ಇತರರು, ೧೯೯೮, ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ ೧, ಪು.೫೩೫

೩. ಅದೇ, ಪು.೫೮೦

೪. ಚನ್ನಬಸಪ್ಪ ಎಸ್.ಪಾಟೀಲ ಮತ್ತು ವಿನೋದ ಪಾಟೀಲ, ೧೯೯೭, ಆನುವೆಲ್ ರಿಪೋರ್ಟ್ ಆನ್ ಎಫಿಗ್ರಾಫಿ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪು.೧೨೫

೫. ದೇವರಕೊಂಡಾರೆಡ್ಡಿ ಮತ್ತು ಇತರರು, ೧೯೯೮, ಪೂರ್ವೋಕ್ತ, ಪು.೫೩೮ ೫೩೯

೬. ಅದೇ, ಪು.೫೩೧

೭. ಸಿದ್ಧಗಂಗಪ್ಪ ಎಚ್.ಎಸ್., ೧೯೯೯, ಧಾರ್ಮಿಕ ವಿಧಿಗಳ ಸಮೀಕ್ಷೆ, ಪು.೧

೮. ಅದೇ, ಪು.೧

೯. ಮಲ್ಲಿಕಾರ್ಜುನ ಶ್ರೀ ಲಕ್ಕೆ, ಕರ್ನಾಟಕ ಜಾತ್ರೆಗಳು, ವಿಚಾರ ಸಂಕಿರಣದ ಪ್ರಬಂಧಗಳು, ಪು.೩

೧೦. ಅದೇ, ಪು.೩

೧೧. ನರಸಿಂಹಮೂರ್ತಿ ಹೆಚ್.ವಿ., ೨೦೦೨, ನಮ್ಮಹಬ್ಬಗಳು, ಪು.೩೬

೧೨. ಅದೇ, ಪು.೩೬

೧೩. ಅದೇ, ಪು.೧೦೪

೧೪. ಅದೇ, ಪು.೧೨೭

೬

# ಸಮಾರೋಪ

ಕರ್ನಾಟಕದ ಸಂಸ್ಕೃತಿ ಪುರಾತನವಾದುದು. ಕರ್ನಾಟಕವು ಐತಿಹಾಸಿಕ ಮಹತ್ವ ಪಡೆದ ಪ್ರಾಚೀನ ನಾಡಾಗಿದೆ. ಸಾಮ್ರಾಜ್ಯಗಳ ನಿರ್ಮಾಣ ಮತ್ತು ಅವುಗಳ ವ್ಯವಸ್ಥೆಯಲ್ಲಿ ಧಾರ್ಮಿಕ ದರ್ಶನ, ದಿವ್ಯ ದೃಷ್ಟಿ, ಸಾಹಿತ್ಯ ದೃಷ್ಟಿ, ಶಿಲ್ಪ ಕಲೆ ಆದಿಯಾಗಿ ಎಲ್ಲ ರಂಗಗಳಲ್ಲಿಯೂ ಕರ್ನಾಟಕದ ಸಾಧನೆ ಸಾರ್ಥಕತೆಯನ್ನು ಪಡೆದಿದೆ. ಅತಿ ಪ್ರಾಚೀನ ಕಾಲದಿಂದಲೂ ಭಾರತೀಯ ಸಂಸ್ಕೃತಿಗೆ ತನ್ನದೇ ಆದ ಉಜ್ವಲ ಪರಂಪರೆಯನ್ನಿತ್ತು ಅದನ್ನು ಬೆಳೆಸಿಕೊಂಡು ಬಂದಿದೆ. ಸರ್ವಧರ್ಮ ಸಮನ್ವಯವನ್ನು ಸ್ಥಾಪಿಸಿದ ಭೂಮಿ ಇದಾಗಿದೆ. ಇಂತಹ ಹಿನ್ನೆಲೆಯನ್ನು ಪಡೆದ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ಕೋಗಳಿ ೫೦೦ರ ಬಿಕ್ಕಿಗ-೭೦ರ ಚಿಕ್ಕ ಉಪವಿಭಾಗ ನೀಲಗುಂದವಾಗಿದೆ. ಈ ನೀಲಗುಂದ, ಪರಿಸರದಲ್ಲಿ ನನ್ನ ಅಧ್ಯಯನ ವ್ಯಾಪ್ತಿಗೆ ನಾಲ್ಕು ಗ್ರಾಮಗಳನ್ನು ಒಳಪಡಿಸಿಕೊಂಡಿದ್ದೇನೆ. ಇಲ್ಲಿ ಆದಿ ಮಾನವನು ಬಾಳಿ ಬದುಕಿದ ಬಗ್ಗೆ ಈ ಪರಿಸರದಲ್ಲಿ ಸಿಕ್ಕಿರುವ ಪ್ರಾಗೈತಿಹಾಸಿಕ ನೆಲೆಗಳೇ ಸಾಕ್ಷಿ. ನೀಲಗುಂದ ತೆಲಗಿ, ಬಾಗಳಿ ಮತ್ತು ಮಾಡಲಗೇರಿ ಇವುಗಳ ಈ ಪರಿಸರಕ್ಕೆ ಹೊಂದಿಕೊಂಡಿರುವ ಪ್ರಾಗೈತಿಹಾಸಿಕ ನೆಲೆಗಳಾಗಿವೆ. ನೀಲಗುಂದವು ಪ್ರಥಮವಾಗಿ ಉಲ್ಲೇಖವಾಗಿರುವುದು ೮ನೇ ಶತಮಾನದ ತ್ರುಟಿತ ಶಾಸನದಲ್ಲಿ ದೊರೆತಿದ್ದು ಅಲ್ಲಿ ಯಾವ ಕಾಲಗಳ ಉಲ್ಲೇಖ ಇಲ್ಲದಿರುವುದರಿಂದ ಈ ಪರಿಸರವು ಮೊದಲು ಯಾವ ರಾಜರ ಆಳ್ವಿಕೆ ಒಳಪಟ್ಟಿದೆ ಎಂದು ಹೇಳುವುದು ಕಷ್ಟ ಸಾಧ್ಯ.

ರಾಷ್ಟ್ರಕೂಟ ದೊರೆಯಾದ ಮೂರನೇ ಗೋವಿಂದನ ಕಾಲದ ಶಾಸನವು ದೊರೆತಿದ್ದು, ಈ ಪರಿಸರ ಮೊದಲು ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತು ಎಂಬುದನ್ನು ಸಾಕ್ಷೀಕರಿಸುತ್ತದೆ. ಇದರಂತೆ ಈ ಪರಿಸರವನ್ನು ಕಲ್ಯಾಣ ಚಾಲುಕ್ಯರು, ಪಾಂಡ್ಯರು, ಕಲಚೂರ್ಯರು, ಹೊಯ್ಸಳರು, ಯಾದವರು, ವಿಜಯನಗರ ಅರಸರು, ಪಾಳೇಗಾರರು, ಸ್ಥಳೀಯ ಹರಪನಹಳ್ಳಿ ಪಾಳೆಯಗಾರರ ಕೊನೆಯ ರಾಣಿ ಮತ್ತು ಮಹಾಬಲಿ ವಂಶದವರು ಆಡಳಿತ ನಡೆಸಿದ್ದರು ಅವರು ಹಾಕಿಸಿದ ಶಾಸನಗಳು ಮತ್ತು ಕಟ್ಟಿಸಿದ ಸ್ಮಾರಕಗಳನ್ನು ಆಧರಿಸಿ ಐತಿಹಾಸಿಕ ಅಧ್ಯಯನ ಮಾಡಲಾಗಿದೆ.

ಈ ಪರಿಸರದಲ್ಲಿ ದೊರೆತ ಶಾಸನಗಳನ್ನು ವಿವಿಧ ಆಯಾಮಗಳಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇವುಗಳನ್ನು ದಾನ ಶಾಸನಗಳು ಸ್ಮಾರಕ ಶಾಸನಗಳು ಎಂದು ವಿಭಾಗ ಮಾಡಿಕೊಂಡು ಅಧ್ಯಯನಕ್ಕೆ

ಒಳಪಡಿಸಲಾಗಿದೆ. ಈ ಶಾಸನದಲ್ಲಿ ದೊರಕುವ ಸಾಹಿತ್ಯವನ್ನು ಗುರುತಿಸಿ ನೀಲಗುಂದದ ವರ್ಣನೆ, ಶಾಸನದಲ್ಲಿ ಛಂದಸ್ಸು, ಶಾಸನದಲ್ಲಿ ರಾಜಮಹಾರಾಜರ ಪ್ರಶಸ್ತಿ(ಬಿರುದು) ವರ್ಣನೆಯ ವೈಶಿಷ್ಟ ಇತ್ಯಾದಿಯಾಗಿ ವಿಂಗಡಿಸಿ ಶಾಸನಗಳ ಭಾಷಿಕ ಅಧ್ಯಯನ ಮಾಡಲಾಗಿದೆ. ಅಲ್ಲದೆ ಶಾಸನಗಳಲ್ಲಿ ಉಲ್ಲೇಖವಾಗಿರುವ ಅಗ್ರಹಾರದ ವೈಶಿಷ್ಟ್ಯತೆಗಳನ್ನು ಅಲ್ಲಿಯ ಮಹಾಜನರಿಗೆ ರಾಜಮಹಾರಾಜರು ನೀಡಿದ ದಾನ-ದತ್ತಿಗಳನ್ನು ಮತ್ತು ಮಹಾಜನರು ನಿರ್ವಹಿಸುವ ಕರ್ತವ್ಯ ಮೊದಲಾದವನ್ನು ಅಧ್ಯಯನದ ಒರೆಗಲ್ಲಿಗೆ ಹಚ್ಚಲಾಗಿದೆ. ಈ ಕುರಿತು ಇನ್ನೂ ಅಧ್ಯಯನ ನಡೆಯಬೇಕಾಗಿದೆ.

ಅಗ್ರಹಾರಗಳ ಮಹಾಜನರು ವೈಷ್ಣವರಾಗಿದ್ದರು. ಅವರು ತಮ್ಮ ವಿದ್ವತ್ ಪರಂಪರೆಗೆ ಹೆಸರಾಗಿದ್ದರು. ಈ ನಾಡಿನಲ್ಲಿ ವಿದ್ಯಾದಾನ ಮಾಡಿದ ಕೀರ್ತಿಗೆ ಪಾತ್ರರಾಗಿದ್ದರು. ಅವರನ್ನು ಕುರಿತು ಅಧ್ಯಯನವೂ ಇಲ್ಲಿದೆ. ಒಟ್ಟಿನಲ್ಲಿ ಧಾರ್ಮಿಕ ಸಾಮರಸ್ಯತೆಗೆ ಈ ನಾಡು ಹೆಸರಾಗಿದ್ದಿತು ಎಂಬುದನ್ನು ಆಧಾರಸಹಿತ ಉಲ್ಲೇಖಿಸಲಾಗಿದೆ.

ಧಾರ್ಮಿಕ ಜೀವನದ ಪ್ರತೀಕವಾಗಿರುವ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳು ಈ ನಾಡಿನಲ್ಲಿ ಅಧಿಕವಾಗಿವೆ. ಈಗ ಇಲ್ಲಿಯ ಏಳಕ್ಕೂ ಹೆಚ್ಚು ಶಾಸನೋಕ್ತ ದೇವಾಲಯಗಳನ್ನು ಗುರುತಿಸಲಾಗಿದೆ. ದೇವಾಲಯಗಳು ವಾಸ್ತುಶಿಲ್ಪ ದೃಷ್ಟಿಯಿಂದ ಮಹತ್ವದಾಗಿವೆ. ನೀಲಗುಂದ, ಭೀಮೇಶ್ವರ, ವೀರಭದ್ರೇಶ್ವರ, ಲಕ್ಷ್ಮೀನಾರಾಯಣ ದೇವಾಲಯ, ಕುಂಚೂರು ಮಲ್ಲಿಕಾರ್ಜುನ ಮತ್ತು ಕಲ್ಲೇಶ್ವರ ದೇವಾಲಯ, ಹಲುವಾಗಲು ಕಲ್ಲೇಶ್ವರ, ಚಿರಸ್ತಹಳ್ಳಿ, ಶಂಕರಲಿಂಗ ದೇವಾಲಯ ಇತ್ಯಾದಿ ದೇವಾಲಯ ಗಳನ್ನು ವೈಷ್ಣವ, ಶೈವ ಎಂದು ವರ್ಗೀಕರಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ದೇವಾಲಯಗಳನ್ನು ಕುರಿತು ನಡೆದಿರುವ ಅಧ್ಯಯನಗಳನ್ನು ಪುನರ್ ಪರಿಶೀಲಿಸಿ ಅದಕ್ಕಿಂತ ಭಿನ್ನವಾಗಿ ಮರು ಅಧ್ಯಯನ ಮಾಡಲಾಗಿದೆ. ದೇವಾಲಯಗಳ ಐತಿಹಾಸಿಕ ಮಹತ್ವ ಮತ್ತು ಅವುಗಳ ಜೀರ್ಣೋದ್ಧಾರ, ಬಿಟ್ಟ ದಾನ-ದತ್ತಿಗಳನ್ನು ವಿಶ್ಲೇಷಣೆ ಮಾಡಲಾಗಿದೆ.

ಶಿಲ್ಪಕಲಾ ದೃಷ್ಟಿಯಿಂದ ಮಹತ್ವದ್ದಾಗಿರುವ ಮೂರ್ತಿ ಶಿಲ್ಪಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಶೈವ ಶಿಲ್ಪಗಳಾದ, ವೀರಭದ್ರೇಶ್ವರ, ನಂದಿ, ಶಿವಲಿಂಗ, ಗಣಪತಿ, ವೈಷ್ಣವ ಶಿಲ್ಪಗಳಾದ ಲಕ್ಷ್ಮೀ ನಾರಾಯಣ, ಅನಂತಶಯನ, ಕೇಶವ, ಶಾಕ್ತಮೂರ್ತಿಗಳಾದ ಮಹಿಷಾಸುರ ಮರ್ದಿನಿ, ಸಪ್ತಮಾತೃಕೆಯರು ಮೊದಲಾದ ಎಲ್ಲ ವಿಗ್ರಹಗಳ ಕಲಾ ನೈಪುಣ್ಯತೆಯನ್ನು ಎತ್ತಿ ಹೇಳಲಾಗಿದೆ.

ನೀಲಗುಂದದ ಗುಡ್ಡದ ವಿರಕ್ತ ಮಠವು ಈ ಭಾಗದ ಜನರ ಆಶಾಭಾವನೆಗೆ ಸ್ಪಂದಿಸುತ್ತಿರುವುದು ಗಮನಾರ್ಹ ಅಂಶವಾಗಿದೆ. ಇಲ್ಲಿನ ಪೀಠಾಧಿಪತಿಗಳು ಈ ಭಾಗದ ಭಕ್ತರ ಆಶೋತ್ತರಗಳನ್ನು ಈಡೇರಿಸಲು ಹಗಲಿರುಳು ಶ್ರಮಿಸುತ್ತಿರುವುದು ನಿಜಕ್ಕೂ ಶ್ಲಾಘನೀಯವಾದುದು.

ಕೇವಲ ಐತಿಹಾಸಿಕ, ಸಾಹಿತ್ಯಿಕ ಅಂಶಗಳಿಗೆ ಪ್ರಾಧಾನ್ಯತೆಯನ್ನು ನೀಡಿದ್ದೇನೆ. ನನ್ನ ಅಧ್ಯಯನ ಪೂರ್ಣವಾಗುವುದಕ್ಕಾಗಿ ನಾನು ನೀಲಗುಂದ ಪರಿಸರವನ್ನು ಆಧುನಿಕ ದೃಷ್ಟಿಕೋನದಿಂದ ನೋಡಲು ಪ್ರಯತ್ನಿಸಿದ್ದೇನೆ. ಈ ಅಧ್ಯಯನದಲ್ಲಿ ನೀಲಗುಂದ ಪರಿಸರದ ಜನರ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸ್ಥಿತಿಗತಿಯನ್ನು ಕುರಿತು ವಿವೇಚಿಸಲಾಗಿದೆ. ಅಲ್ಲದೆ ಪಾಪ-ಪುಣ್ಯಗಳ ಪರಿಕಲ್ಪನೆಯನ್ನು ಹೊಂದಿದ ಜನರು ಹಲವು ನಂಬಿಕೆ ಆಚರಣೆಗಳನ್ನು ಪರಿಪಾಲಿಸುತ್ತಿದ್ದುದನ್ನು ಇಲ್ಲಿ ಚರ್ಚಿಸಲಾಗಿದೆ.

ಒಟ್ಟಾರೆಯಾಗಿ ನೀಲಗುಂದ ಪರಿಸರದ ಚರಿತ್ರೆಯನ್ನು ಕಟ್ಟುವಲ್ಲಿ ಮಹತ್ತರವಾದ ಆಧಾರಗಳನ್ನು ಶಾಸನಗಳು ಒದಗಿಸಿವೆ. ಇದಕ್ಕೆ ಒಂದು ನೆಲೆ ಮತ್ತು ಸ್ವತಂತ್ರ ಚರಿತ್ರೆಯನ್ನು ನಿರ್ಮಿಸುವಲ್ಲಿ ಅಧ್ಯಯನವು ಮೈಲುಗಲ್ಲಾಗಿದೆ.

## ಅನುಬಂಧಗಳು

೧. ಆಕರ ಗ್ರಂಥಗಳು

೨. ಛಾಯಾಚಿತ್ರಗಳು

೩. ದೇವಾಲಯಗಳ ತಳವಿನ್ಯಾಸದ ನಕ್ಷೆ

೧

## ಆಕರ ಗ್ರಂಥಗಳು

೧. ಚಿದಾನಂದಮೂರ್ತಿ ಎಂ., ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನಬುಕ್, ಬೆಂಗಳೂರು

೨. ಪಾಟೀಲ್ ಚನ್ನಬಸಪ್ಪ, ೧೯೮೪, ಕರ್ನಾಟಕ ಶಿಲ್ಪಗಳಲ್ಲಿ ಪಂಚತಂತ್ರ, ಪಾಚ್ಯವಸ್ತು ಸಂಗ್ರಹಾಲಯ ಮೈಸೂರು

೩. ಕುಂ.ಬಾ.ಸ. ೧೯೯೦, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ಮಾಲತೇಶ ಪ್ರಕಾಶನ, ಕುಂಚೂರು

೪. ಗಿರಿಜ ಟಿ., ೧೯೯೧, ಚಿತ್ರದುರ್ಗ ಜಿಲ್ಲಾದರ್ಶನ, ರೇಖಾ ಪ್ರಕಾಶನ, ದಾವಣಗೆರೆ

೫. ತಿಪ್ಪೇರುದ್ರಸ್ವಾಮಿ ಹೆಚ್., ೧೯೯೨, ಕನ್ನಡ ಸಂಸ್ಕೃತಿ ಸಮೀಕ್ಷೆ ಡಿ.ವಿ.ಕೆ.ಮೂರ್ತಿ, ಮೈಸೂರು

೬. ದೇವರಕೊಂಡಾರೆಡ್ಡಿ, ೧೯೯೪, ತಲಕಾಡಿನ ಗಂಗರ ದೇವಾಲಯಗಳು : ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು

೭. ರಾಮಚಂದ್ರರಾವ್, ೧೯೭೬, ಭಾರತದ ದೇವಾಲಯ ನೆಲೆ ಹಿನ್ನೆಲೆ, ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೮. ಗಿರಿಜ ಟಿ., ೧೯೮೫, ದಾವಣಗೆರೆ ದರ್ಶಿನಿ, ಪ್ರಜಾವಾದಿ ಪ್ರಕಾಶನ, ದಾವಣಗೆರೆ

೯. ಶೇಷಶಾಸ್ತ್ರಿ ಆರ್., ೧೯೮೨, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೦. ತಿಪ್ಪೇಸ್ವಾಮಿ ೨೦೦೦, ದಾವಣಗೆರೆ ಜಿಲ್ಲೆಯ ದೇವಾಲಯಗಳು, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ

೧೧. ಮಂಜುನಾಥ ಪಾಟೀಲ್, ೨೦೦೩, ದಾವಣಗೆರೆ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ

೧೨. ಚನ್ನಬಸಪ್ಪ ಪಾಟೀಲ್, ೧೯೭೬, ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಯ ದೇವಾಲಯಗಳು, ಡೈರೆಕ್ಟರೈಟ್, ಅರ್ಕಾಲೀಜಿ ಆ್ಯಂಡ್ ಮ್ಯೂಸಿಯಂ, ಮೈಸೂರು

೧೩. ಶಿವರಾಮ ಕಾರಂತ, ೧೯೭೬, ಚಾಲುಕ್ಯ ವಾಸ್ತುಶಿಲ್ಪ, ಮೈಸೂರು ರಾಜ್ಯದ ಲಲಿತ ಕಲಾ ಅಕಾಡೆಮಿ, ಬೆಂಗಳೂರು

೧೪. ಶಂಕರ ನಾರಾಯಣರಾವ್ ಹೆಚ್., ೧೯೮೨, ಶ್ರೀ ಹರಿಹರ ದೇವಾಲಯ, ಶಾರದಾ ಮಂದಿರ ಮೈಸೂರು

೧೫. ಅಪರ್ಣ ಕೂ.ಸ., ೧೯೯೯, ದೇವಾಲಯ ವಾಸ್ತುಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ

೧೬. ಚಿದಾನಂದಮೂರ್ತಿ ಎಂ., ೧೯೭೬, ಸಂಶೋಧನ, ತರಂಗ ಸಂಪುಟ-೨, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು

೧೭. ನಾಗಯ್ಯ ಜೆ.ಎಂ., ೧೯೯೨, ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಸಾಂಸ್ಕೃತಿಕ ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ನಾಗನೂರುಮಠ

೧೮. ಪರಶಿವಮೂರ್ತಿ ಡಿ.ವಿ., ೧೯೯೯, ಕನ್ನಡ ಶಾಸನಶಿಲ್ಪ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೯. ಶಿವತಾರಕ್ ಕೆ.ಬಿ., ೧೯೯೧, ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ

೨೦. ಕುಂಬಾ ಸದಾಶಿವಪ್ಪ, ೧೯೯೬, ಹರಪನಹಳ್ಳಿ ಪಾಳೆಗಾರರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨೧. ರವೀಂದ್ರನಾಥ ಕೆ., ೨೦೦೫, ಬಳ್ಳಾರಿ ಜಿಲ್ಲಾ ದರ್ಶನ, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ

೨೨. ನಾಗಯ್ಯ ಜೆ.ಎಂ., ೨೦೦೨. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಲೋಹಿಯಾ ಪ್ರಕಾಶನ, ಬಳ್ಳಾರಿ

೨೩. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೪. ಕೆ.ಎಂ.ಸುರೇಶ್, ವಾಸುದೇವ ಬಡಿಗೇರ, ಎಸ್ .ವೈ.ಸೋಮಶೇಖರ, ಕೊಟ್ರೇಶ್ ಎಂ., ೧೯೯೯, ಕರ್ನಾಟಕ ದೇವಾಲಯಕೋಶ, ಬಳ್ಳಾರಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೫. ಭಾರತಿ ಅಳವಂಡಿ ಮಠ, ೨೦೦೩, ಬಾಗಳಿ ಶಾಸನಗಳು ಮತ್ತು ಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ

೨೬. ನಾಗಯ್ಯ ಜೆ.ಎಂ., ೧೯೯೧, "ಬಳ್ಳಾರಿ ಜಿಲ್ಲೆಯ ಶಾಸನಗಳು" ಗುಲ್ಬರ್ಗ ವಿಶ್ವವಿದ್ಯಾಲಯ, ಗುಲ್ಬರ್ಗ

೨೭. ಚಂದ್ರಶೇಖರ ನಾರಣಾಪುರ, ೨೦೦೨, ಕರ್ನಾಟಕ ವೀರಶೈವ ಮಠಗಳು, ಮುದ್ದಣ ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್, ಬೆಂಗಳೂರು

೨೮. ಕೊಟ್ರೇಶ್ ಎಂ., ೧೯೯೬, ಉಚ್ಚಂಗಿದುರ್ಗ (ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ), ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್.ನಿಬಂಧ

ಲೇಖನಗಳು

೧. ನಾಗಭೂಷಣ ಎಸ್.ಎಂ., ೨೦೦೩, *ಬಳ್ಳಾರಿ ಜಿಲ್ಲೆಯ ಶಾಸನ ಕವಿಗಳು ರೂವಾರಿಗಳು,* ಇತಿಹಾಸ ದರ್ಶನ, ಸಂಪುಟ ೧೮, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೨. ರಾಜಗೋಪಾಲ ಕ.ವೆಂ., ೨೦೦೩, *ಬಾಗಳಿಯ ಪಂಚಾಂಗ,* ಇತಿಹಾಸ ದರ್ಶನ, ಸಂ.೧೮, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೩. ಕುಂ.ಬಾ.ಸ., ೨೦೦೩, *ನೊಳಂಬವಾಡಿ ೩೨೦೦೦ ರಾಜ್ಯ ಹಾಗೂ ಉಚ್ಚಂಗಿ ಪಾಡ್ಯರು,* ಇತಿಹಾಸ ದರ್ಶನ, ಸಂಪುಟ.೧೮, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೪. ಕೊಟ್ರೇಶ್ ಎಂ., ೨೦೦೩, *ಶಾಸನೋಕ್ತ ಐತಿಹಾಸಿಕ ನೆಲೆ ಮಾಡಲಗೇರಿ,* ಇತಿಹಾಸ ದರ್ಶನ, ಸಂಪುಟ ೧೮, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೫. ಸುಧಾಮಣಿ ಎಂ., ೨೦೦೧, *ಸಂಕೇತಿ ಬ್ರಾಹ್ಮಣರ ವಲಸೆಯ ಕಾಲ,* ಇತಿಹಾಸ ದರ್ಶನ, ಸಂಪುಟ ೧೬, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೬. ಭಾರತಿ ಅಳವಂಡಿ ಮಠ, ೨೦೦೨, *ಹರಪನಹಳ್ಳಿಯ ಮೊದಲ ಪಾಳೆಯಗಾರ ಬಾಗಳಿಯ ದಾದಯ್ಯ ನಾಯಕ,* ಇತಿಹಾಸ ದರ್ಶನ, ಸಂಪುಟ ೧೭, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೭. ವಸಂತಲಕ್ಷ್ಮಿ ಕೆ., ೨೦೦೪, *ಬಳ್ಳಾರಿ ಜಿಲ್ಲೆಯಲ್ಲಿದ್ದ ಕಾಶ್ಮೀರಿ ಬ್ರಾಹ್ಮಣರು,* ಇತಿಹಾಸ ದರ್ಶನ, ಸಂಪುಟ ೧೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೮. *ಲಕ್ಷ್ಮಣ್ ತೆಲಗಾವಿ, ೨೦೦೦, ಚಿತ್ರದುರ್ಗ ಮತ್ತು ಹರಪನಹಳ್ಳಿ ನಾಯಕ ಅರಸರ ಸಂಬಂಧ ಕೆಲವು ಸಮಸ್ಯೆಗಳು,* ಇತಿಹಾಸ ದರ್ಶನ, ಸಂಪುಟ ೧೫, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

ಶಾಸನ ಸಂಪುಟಗಳು

೧. ದೇವರಕೊಂಡಾರೆಡ್ಡಿ, ಡಿ.ವಿ.ಪರಮಶಿವಮೂರ್ತಿ, ಭಟ್‌ಸೂರಿ, ಕಲವೀರಮನ್ನಾಚಾರ್, ೧೯೯೮, ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಸೋಮನಾಥಯ್ಯ, ೧೯೮೪, ಬಳ್ಳಾರಿ ಜಿಲ್ಲೆ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು

೨

## ಛಾಯಾಚಿತ್ರಗಳ ವಿವರಗಳ ಪಟ್ಟಿ

೧. ಶಂಕರಲಿಂಗ ದೇವಾಲಯ, ಚಿರಸ್ತಹಳ್ಳಿ

೨. ಮುಕ್ತಿರಾಮೇಶ್ವರ ದೇವಾಲಯದ ಒಳಗಿನ ಶಾಸನ, ನೀಲಗುಂದ

೩. ಭೀಮೇಶ್ವರ ದೇವಾಲದ ಆವರಣ, ನೀಲಗುಂದ

೪. ಮಲ್ಲಿಕಾರ್ಜುನ ದೇವಾಲಯ, ಕುಂಚೂರು

೫. ಶಂಕರಲಿಂಗ ದೇವಾಲಯದ ಮುಂಭಾಗ, ಚಿರಸ್ತಹಳ್ಳಿ

೬. ಮುಕ್ತಿರಾಮೇಶ್ವರ ದೇವಾಲಯದ ಮುಂಭಾಗ, ನೀಲಗುಂದ

೭. ಮಲ್ಲಿಕಾರ್ಜುನ ದೇವಾಲಯದ ಬಲಭಾಗ, ಕುಂಚೂರು

೮. ಕಲ್ಲೇಶ್ವರ ದೇವಾಲಯದ ಮುಂಭಾಗ, ಹಲುವಾಗಲು

೯. ಭೀಮೇಶ್ವರ ದೇವಾಲಯ, ನೀಲಗುಂದ

೧೦. ಮುಕ್ತಿರಾಮೇಶ್ವರ ದೇವಾಲಯ, ನೀಲಗುಂದ

೧೧. ಅನಂತಶಯನ ದೇವಾಲಯ, ನೀಲಗುಂದ

೧೨. ಮಲ್ಲಿಕಾರ್ಜುನ ದೇವಾಲಯ, ಕುಂಚೂರು

೧೩. ಭೀಮಲಿಂಗೇಶ್ವರ ದೇವಾಲಯದ ಪಾರ್ಶ್ವನಾಥ ನೋಟ, ನೀಲಗುಂದ

೧೪. ಶಂಕರಲಿಂಗ ದೇವಾಲಯ, ಚಿರಸ್ತಹಳ್ಳಿ

೧೫. ಭೀಮೇಶ್ವರ ದೇವಾಲಯ, ನೀಲಗುಂದ

೧೬. ಆಂಜನೇಯ ದೇವಾಲಯದ ಮುಂಭಾಗದ ಗಜಲಕ್ಷ್ಮಿ, ಕುಂಚೂರು

೧೭. ಅನಂತಶಯನಮೂರ್ತಿ, ನೀಲಗುಂದ

೧೮. ಆಂಜನೇಯಮೂರ್ತಿ, ಹಲುವಾಗಲು

೧೯. ಕೇಶವಮೂರ್ತಿ, ಹಲುವಾಗಲು

೨೦. ಭೀಮೇಶ್ವರ ದೇವಾಲಯದ ಒಳಭಾಗದಲ್ಲಿರುವ ಸಪ್ತಮಾತೃಕೆಯರು, ನೀಲಗುಂದ

೨೧. ಲಕ್ಷ್ಮೀನಾರಾಯಣ, ನೀಲಗುಂದ

೨೨. ಭೀಮೇಶ್ವರ ದೇವಾಲಯದ ಒಳಭಾಗದಲ್ಲಿರುವ ಮಹಿಷಾಸುರ ಮರ್ದಿನಿ, ನೀಲಗುಂದ



ಶಂಕರಲಿಂಗ ದೇವಾಲಯ, ಚಿರಸ್ತಹಳ್ಳಿ



ಮುಕ್ತಿರಾಮೇಶ್ವರ ದೇವಾಲಯದ ಒಳಗಿನ ಶಾಸನ, ನೀಲಗುಂದ



ಭೀಮೇಶ್ವರ ದೇವಾಲದ ಆವರಣ, ನೀಲಗುಂದ



ಮಲ್ಲಿಕಾರ್ಜುನ ದೇವಾಲಯು, ಕುಂಚೂರು



ಶಂಕರಲಿಂಗ ದೇವಾಲಯದ ಮುಂಭಾಗ, ಚಿರಸ್ತಹಳ್ಳಿ



ಮುಕ್ತಿರಾಮೇಶ್ವರ ದೇವಾಲಯದ ಮುಂಭಾಗ, ನೀಲಗುಂದ



ಮಲ್ಲಿಕಾರ್ಜುನ ದೇವಾಲಯದ ಬಲಭಾಗ, ಕುಂಚೂರು



ಕಲ್ಲೇಶ್ವರ ದೇವಾಲಯದ ಮುಂಭಾಗ, ಹಲುವಾಗಲು



ಭೀಮೇಶ್ವರ ದೇವಾಲಯ, ನೀಲಗುಂದ



ಮುಕ್ತಿರಾಮೇಶ್ವರ ದೇವಾಲಯ, ನೀಲಗುಂದ



ಅನಂತಶಯನ ದೇವಾಲಯ, ನೀಲಗುಂದ



ಮಲ್ಲಿಕಾರ್ಜುನ ದೇವಾಲಯ, ಕುಂಚೂರು



ಭೀಮಲಿಂಗೇಶ್ವರ ದೇವಾಲಯದ ಪಾರ್ಶ್ವ ನೋಟ, ನೀಲಗುಂದ



ಶಂಕರಲಿಂಗ ದೇವಾಲಯ, ಚಿರಸ್ತಹಳ್ಳಿ



ಭೀಮೇಶ್ವರ ದೇವಾಲಯ, ನೀಲಗುಂದ



ಆಂಜನೇಯ ದೇವಾಲಯದ ಮುಂಭಾಗದ ಗಜಲಕ್ಷ್ಮಿ, ಕುಂಚೂರು



ಅನಂತಶಯನಮೂರ್ತಿ, ಸೀಲಗುಂದ



ಆಂಜನೇಯಮೂರ್ತಿ, ಹಲುವಾಗಲು



ಕೇಶವಮೂರ್ತಿ, ಹಲುವಾಗಲು



ಭೀಮೇಶ್ವರ ದೇವಾಲಯದ ಒಳಭಾಗದಲ್ಲಿರುವ ಸಪ್ತಮಾತೃಕೆಯರು, ನೀಲಗುಂದ



ಲಕ್ಷ್ಮೀನಾರಾಯಣ, ನೀಲಗುಂದ



ಭೀಮೇಶ್ವರ ದೇವಾಲಯದ ಒಳಭಾಗದಲ್ಲಿರುವ ಮಹಿಷಾಸುರ ಮರ್ದಿನಿ, ನೀಲಗುಂದ

ಭೀಮೇಶ್ವರ ದೇವಾಲಯದ ತಳವಿನ್ಯಾಸ, ನೀಲಗುಂದ



ಚನ್ನಬಸಪ್ಪ ಪಾಟೀಲ, ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಯ
ದೇವಾಲಯಗಳು

ಲಕ್ಷ್ಮೀನಾರಾಯಣ ದೇವಾಲಯದ ತಳವಿನ್ಯಾಸ, ನೀಲಗುಂದ



ಚನ್ನಬಸಪ್ಪ ಪಾಟೀಲ, ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಯ ದೇವಾಲಯಗಳು

ಕಲ್ಲೇಶ್ವರ ದೇವಾಲಯದ ತಳವಿನ್ಯಾಸ, ಹಲುವಾಗಲು



